# ಮಾನಸಿ

ತಿಂಗಳ ಪತ್ರಿಕೆ ಏಪ್ರಿಲ್ : 1997

* ಲಿಂಗಾಧಾರಿತ ನ್ಯಾಯ ಕೇವಲ ಕಾನೂನಿನ ಪ್ರಶ್ನೆಯೆ?
* ಸಮಾನ ನಾಗರೀಕ ಸಂಹಿತೆ - ಪ್ರತಿಯೊಬ್ಬ ಮಹಿಳೆಯ ಪ್ರಾಥಮಿಕ ಹಕ್ಕು
* ಸಾಲುಮರದ ತಿಮ್ಮಕ್ಕನ ಜೊತೆ ಮರದ ನೆರಳಿನಲ್ಲಿ ಒಂದೆರಡು ಗಳಿಗೆ
* ಕರ್ನಾಟಕದಲ್ಲಿ ಜಾರಿಗೆ ತರಬೇಕಾಗಿರುವ ಜನನ ಪೂರ್ವ ರೋಗ ನಿರ್ಣಯ ಕಾಯಿದೆ

# ಮಾನಸ

ತಿಂಗಳ ಪತ್ರಿಕೆ

ಸಂಪುಟ : 12 ಸಂಚಿಕೆ : 14

ಏಪ್ರಿಲ್ : 1997





ವಿಳಾಸ :

"ಮಾನಸ" ತಿಂಗಳ ಪತ್ರಿಕೆ

ಪಂಚಾಯಿತಿ ರಸ್ತೆ

ಕಾಡುಗೋಡಿ ಪೋಸ್ಟ್

ಬೆಂಗಳೂರು - 560 067



ಸೂಚನೆ : ಬಿಡಿ ಪ್ರತಿ **3-00** ರೂ.

ವಾರ್ಷಿಕ ಚಂದಾ **40-00** ರೂ.

ಒಂದು ವಿಶೇಷ ಸಂಚಿಕೆಯೊಂದಿಗೆ

ಒಟ್ಟು ಹನ್ನೊಂದು ಸಂಚಿಕೆಗಳು


**ಈ ಸಂಚಿಕೆಯಲ್ಲಿ....**






ಸಂಪಾದಕರು, ಪ್ರಕಾಶಕರು ಹಾಗೂ ಮುದ್ರಕರು : ಮಾನವಿ ಮುದ್ರಣಾಲಯ

ಪಂಚಾಯಿತಿ ರಸ್ತೆ, ಕಾಡುಗೋಡಿ ಅಂಚೆ, ಬೆಂಗಳೂರು - ೫೬೦ ೦೬೭

# ಸಂಪಾದಕೀಯ



ಎಲ್ಲ ಧರ್ಮ/ಪಂಗಡಗಳ ಹೆಂಗಸರಿಗೂ ಸಮಾನವಾದ ನ್ಯಾಯ ದಕ್ಕಿಸಿಕೊಡುವಂತಾ 'ಸಮಾನ ನಾಗರೀಕ ಸಂಹಿತೆ'ಯ ಜಾರಿಯಾಗಬೇಕೆಂಬುದು ಮಹಿಳಾ ಚಳುವಳಿ ಮುಂದಿಟ್ಟಿರುವ ಅತ್ಯಂತ ಮುಖ್ಯ ಬೇಡಿಕೆಗಳಲ್ಲೊಂದು. ಶಾಬಾನೂ ಪ್ರಕರಣ (ವಿವರಗಳಿಗೆ 'ಸಮಾನ ನಾಗರೀಕ ಸಂಹಿತೆ' ಕುರಿತ ಮಾನಸದ ಸಂಚಿಕೆ ನೋಡಿ)ದಿಂದಲಾಗಾಯ್ತು, ಹಿಂದೂ ಮೂಲಭೂತವಾದೀ ಶಕ್ತಿಗಳು 'ಸಮಾನ ನಾಗರೀಕ ಸಂಹಿತೆ'ಯನ್ನು ತಮ್ಮ ಅಜೆಂಡಾವನ್ನಾಗಿ ಮಾಡಿಕೊಂಡುಬಿಟ್ಟಿದ್ದು ಮಹಿಳಾ ಚಳುವಳಿಗೆ ಒಂದು ರೀತಿಯಲ್ಲಿ ಕೈಕಟ್ಟಿ ಬಿಟ್ಟಂತಾಯಿತು. ಅದೇನೇಯಾದರೂ ಅಲ್ಪ ಸಂಖ್ಯಾತರ ಹಿತಾಸಕ್ತಿ/ಹಕ್ಕುಗಳನ್ನು ದಮನಿಸಲಿಕ್ಕಾಗಿಯೇ ಹಿಂದೂತ್ವವಾದಿಗಳು ಪ್ರತಿಪಾದಿಸುತ್ತಿರುವ ಸಮಾನ ನಾಗರೀಕ ಸಂಹಿತೆಯ ಕಲ್ಪನೆಗೂ, ಈ ನೆಲದ ಎಲ್ಲ ಹೆಂಗಸರ ಮೂಲಭೂತ ಹಕ್ಕುಗಳನ್ನು ಎತ್ತಿ ಹಿಡಿಯುವ ತಮ್ಮ ಕಲ್ಪನೆಯ ಸಮಾನ ನಾಗರೀಕ ಸಂಹಿತೆಗೂ ಇರುವ ವ್ಯತ್ಯಾಸವನ್ನು ಸ್ಪಷ್ಟವಾಗಿ ತೋರಿಸಿಕೊಡುವುದು ಮಹಿಳಾ ಚಳುವಳಿಗೆ ಸಾಧ್ಯವಾಗಿದ್ದೂ ಅಲ್ಲದೆ ಬೇಡಿಕೆಯೂ ಬಲಗೊಂಡಿತು. ಆದರೆ ಈ ವೇಳೆಗಾಗಲೇ ಮಹಿಳಾ ಚಳುವಳಿಯೊಳಗಡೆಯೇ ಇನ್ನೊಂದೆಡೆ ಸಮಾನ ನಾಗರೀಕ ಸಂಹಿತೆಯ ಬಗ್ಗೆ ಆಳವಾದ ಮರು ಚಿಂತನೆ ಕೂಡ ಪ್ರಾರಂಭವಾಗಿದ್ದಿತು. ಅನೇಕ ಪ್ರಮುಖ ರಾಜಕೀಯ ಪಕ್ಷಗಳು ತಮ್ಮ ಕೋಮುವಾದೀ ಮತ್ತು ಸೆಕ್ಯುಲರ್ ಎಂದು ಹೇಳಿಕೊಳ್ಳುವ ಆಸಕ್ತಿಗಳ ಹಿನ್ನಲೆಯಲ್ಲೇ ಇಂದು ಸಮಾನ ನಾಗರೀಕ ಸಂಹಿತೆಯನ್ನು ತಮ್ಮ ಪ್ರಣಾಳಿಕೆಗಳೊಳಕ್ಕೆ ಅಜೆಂಡಾವಾಗಿ ಸೇರಿಸಿಕೊಂಡಿರುವಾಗ (ಇಲ್ಲಿ ಮಹಿಳೆಯರ ಹಕ್ಕು ಮಾತ್ರ ಮಾಯವಾಗಿದೆ), ಇದರ ಪ್ರಾಥಮಿಕ ಪ್ರತಿಪಾದಕವಾದ ಮಹಿಳಾ ಚಳುವಳಿಯೊಳಗೆ ಇದರ ಪರ ಮತ್ತು ಪರ್ಯಾಯದ ಎರಡು ಸ್ಪಷ್ಟ ನಿಲುವುಗಳು ತಲೆ ಎತ್ತಿವೆ! ಈ ಸಂಚಿಕೆಯಲ್ಲಿ ಪ್ರಕಟವಾಗಿರುವ ಹೈದ್ರಾಬಾದಿನ 'ಅನ್ವೇಷಿ' ಮಹಿಳಾ ಗುಂಪು ಮತ್ತು ದೆಹಲಿಯ 'ಸಹೇಲಿ' ಬಳಗಗಳಿಂದ ಪ್ರಕಟಗೊಂಡಿರುವ ಲೇಖನಗಳಲ್ಲಿ ಈ ಎರಡು ನಿಲುವುಗಳು ಸ್ಪಷ್ಟವಾಗಿ ಪ್ರತಿನಿಧಿತಗೊಂಡಿವೆ.

ಸ. ನಾ. ಸಂಹಿತೆ ಬಹುಸಂಖ್ಯಾತರ ಕಾನೂನುಗಳನ್ನು ಹೇರುವ ಮೂಲಕ ವಿವಿಧ ಪಂಗಡಗಳ ಹಿತಾಸಕ್ತಿಯನ್ನು ಮೂಲೆ ಗುಂಪಾಗಿಸುತ್ತದೆಯೆನ್ನುತ್ತಾರೆ 'ಅನ್ವೇಷಿ'ಯರು. ಇಂಡಿಯಾದಂತ ಸಂಕೀರ್ಣ, ಬಹುಮುಖೀ ಸಾಮಾಜಿಕ-ಸಾಂಸ್ಕೃತಿಕ ಒಳ ವಿವರಗಳುಳ್ಳ ದೇಶದಲ್ಲಿ ಹೆಂಗಸರು ಬೇರೆ ಬೇರೆ ರೀತಿಯಲ್ಲಿ "ಆಗಲ್ಪಟ್ಟಿರುವುದರಿಂದ", ಈ ಎಲ್ಲ ವಾಸ್ತವಗಳನ್ನು ಬದಿಗೊತ್ತಿ ಕೇವಲ ಸ್ತ್ರೀ ಎಂಬೊಂದೇ ಕಾರಣದಡಿ ತಮ್ಮ ಹಕ್ಕನ್ನು ಪ್ರತಿಪಾದಿಸಿಕೊಳ್ಳುವುದು ಸಾಧ್ಯವಿಲ್ಲವೆಂಬುದೇ 'ಅನ್ವೇಷಿ'ಯ ನಿಲುವು. ಕೇವಲ ನ್ಯಾಯಾಲಯದಲ್ಲಿ ಮಾತ್ರ ನ್ಯಾಯ ಹುಡುಕದೆ ಮಹಿಳೆಯರು ಜಾತಿ ಪಂಚಾಯತಿಗಳಲ್ಲಿ, ಧಾರ್ಮಿಕ ಪಂಗಡಗಳಲ್ಲಿ, ಕುಟುಂಬಗಳಲ್ಲಿ ಘರ್ಷಣೆಗೆ ಪರಿಹಾರ ಕಂಡುಕೊಳ್ಳಬೇಕೆಂದು ಸಲಹಿಸುತ್ತಾರೆ ಅನ್ವೇಷಿಯ ಗೆಳತಿಯರು.

ಸಮಾನ ನಾಗರೀಕ ಸಂಹಿತೆ ಪ್ರತಿ ಮಹಿಳೆಯ ಪ್ರಾಥಮಿಕ ಹಕ್ಕು ಎಂದು ಬಲವಾಗಿ ಪ್ರತಿಪಾದಿಸುವ 'ಸಹೇಲಿ', ಮಹಿಳೆಯರ ಹಕ್ಕುಗಳನ್ನು ಹತ್ತಿಕ್ಕಿಯೇ ವೈವಿಧ್ಯತೆಯನ್ನು ಕಾಪಾಡಿಕೊಳ್ಳಬೇಕೇನು? ಎಂದು ಪ್ರಶ್ನಿಸುತ್ತಾರೆ. ಮಹಿಳಾ ಹಕ್ಕುಗಳ ಬೇಡಿಕೆಗಳನ್ನು ಜಾತಿ, ಕೋಮು, ಧರ್ಮಾಧಾರಿತ ವಿವರಗಳಿಗೆ ತಳುಕು ಹಾಕಿ ಬಿಡುವುದರಿಂದ, ಎಲ್ಲ ಮಹಿಳೆಯರಿಗೆ ಸಮಾನ ಹಕ್ಕು ದಕ್ಕಬೇಕೆನ್ನುವ ಮಹಿಳಾ ಹಕ್ಕುಗಳ ಹೋರಾಟಕ್ಕೆ ಕೊಡಲಿ ಪೆಟ್ಟು ಬಿದ್ದಂತಾಗುತ್ತದೆ. ಅಲ್ಲದೆ, ಕತ್ತು ಹಿಸುಕಿ ಉಸಿರುಗಟ್ಟಿಸುವ ಕೌಟುಂಬಿಕ, ಸಾಮುದಾಯಿಕ ಮತ್ತು ಧಾರ್ಮಿಕ ರಚನೆಗಳ ಯಾವ ಕ್ರೌರ್ಯದಿಂದ ಬಿಡುಗಡೆ ಪಡೆಯುವುದು ಮಹಿಳೆಯರ ಯಾವತ್ತೂ ಹೋರಾಟವಾಗಿತ್ತೋ, ಈಗ ಮತ್ತದೇ ರಚನೆಗಳೊಳಕ್ಕೆ ಮರಳಿ ನ್ಯಾಯ ಕಂಡುಕೊಳ್ಳಿ ಎಂಬುದು ಸಂದೇಶವಾಗಬೇಕೇ ಎಂಬುದು ಸಹೇಲಿಯ ಆತಂಕ. ಜಾತಿ, ಧರ್ಮ, ಪಂಗಡಗಳಾಚೆಗೂ ಒಂದಾದ ಸಮಾನ ಆಸಕ್ತಿಗಳನ್ನು ಹಂಚಿಕೊಂಡು ಸಂಘಟನೆಗೊಳ್ಳುತ್ತಾ ಬಂದಿರುವ ಮಹಿಳಾ ಚಳುವಳಿಯ ಪ್ರಯತ್ನವನ್ನೇ ಅಲ್ಲಗಳೆದುಬಿಟ್ಟು, ಮೇಲಿನ ಅಂಶಗಳ ಆಧಾರದ ಮೇಲೆ ಮಹಿಳೆಯರನ್ನು ಪ್ರತ್ಯೇಕಗೊಳಿಸಿ ಸಂಘಟಿಸುವ ಪಿತೃಪ್ರಧಾನ ಶಕ್ತಿಗಳಿಗೆ ಮಣೆ ಹಾಸಿಕೊಟ್ಟಂತೆಯೇ ಇದು ಎಂಬುದು ಅವರ ವಾದ.

'ಮಾನಸ' ಈ ಹಿಂದೆಯೇ ಸಮಾನ ನಾಗರೀಕ ಸಂಹಿತೆಯ ಪರವಾದ ಸ್ಪಷ್ಟ ನಿಲುವನ್ನು ವ್ಯಕ್ತ ಪಡಿಸಿದೆ. ಒಟ್ಟು ಮಾನವ ಹಕ್ಕುಗಳ ವಿಚಾರದಲ್ಲಿ ಏಳದ ನೆಲದ ವೈವಿಧ್ಯತೆಯ, ಬಹುಮುಖೀ ಸಂಸ್ಕೃತಿಯ ಪ್ರಶ್ನೆ ಮಹಿಳಾ ಹಕ್ಕುಗಳ ವಿಚಾರದಲ್ಲಿ ಮಾತ್ರ ಅನ್ವಯವಾಗಬೇಕೇಕೆ? ನ್ಯಾಯಾಲಯವೇ ಅಂತಿಮ ಉತ್ತರವಲ್ಲ, ಖಂಡಿತಾ ನಿಜ. ಆದರೆ ತೀವ್ರ ಪಿತೃಪ್ರಧಾನ ಸ್ವರೂಪದ ಧಾರ್ಮಿಕ, ಸಾಮುದಾಯಿಕ ವ್ಯವಸ್ಥೆಗಳಿಗೆ ಹಿಂದಿರುಗಿ ಅಲ್ಲೇ ನ್ಯಾಯ ಕಂಡುಕೊಳ್ಳಿ ಎನ್ನುವ ಸಂದೇಶ ಮಹಿಳೆಯರ ಯಾವತ್ತೂ ಒಂದಾದ ಹೋರಾಟಕ್ಕೆ ದೊಡ್ಡ ಆಪತ್ತೇ ಸರಿ. ಅದೂ ಅಲ್ಲದೇ ತಮ್ಮ ಕುಟುಂಬ, ಧರ್ಮ, ಸಮುದಾಯಗಳಿಂದ ಸಂಪೂರ್ಣವಾಗಿ ಪರಕೀಯಗೊಂಡಿರುವ ಸಹಸ್ರಾರು ಮಹಿಳೆಯರು ಹೋಗಬೇಕಾದರೂ ಎಲ್ಲಿ? ಸಮಾನ ನಾಗರೀಕ ಸಂಹಿತೆ ನಮ್ಮೆಲ್ಲರ ಮೂಲಭೂತ ಹಕ್ಕು. ಅದು ನಮಗೆ ದಕ್ಕಲೇ ಬೇಕು.

# ಲಿಂಗಾಧಾರಿತ ನ್ಯಾಯ ಕೇವಲ ಕಾನೂನಿನ ಪ್ರಶ್ನೆಯೆ?

1970 ಹಾಗೂ 1980ರ ಆದಿಭಾಗದಲ್ಲಿ ಭಾರತೀಯ ಮಹಿಳಾ ಚಳುವಳಿಯು ಅನೇಕ ಸಮಸ್ಯೆಗಳು ಹಾಗೂ ದೃಷ್ಟಿಕೋನಗಳ ಬಗ್ಗೆ ಒಂದು ವಿಶಾಲವಾದ ವಿಚಾರಧಾರೆಯನ್ನೊಳಗೊಂಡಂತೆ ರೂಪಿತವಾಗಿತ್ತು. ಆದರೆ 1985-86ರ ಹೊತ್ತಿಗೆ ಶಾಬಾನು ಪ್ರಕರಣದ ಚರ್ಚೆಯಲ್ಲಿ ಹಲವಾರು ತಪ್ಪು-ಒಪ್ಪುಗಳು ಸ್ಪಷ್ಟವಾಗಿ ಕಾಣಿಸಿಕೊಳ್ಳತೊಡಗಿದವು. ಶಾಬಾನು ಪ್ರಕರಣದಲ್ಲಿ ವಿಚ್ಛೇದನ ಹೊಂದಿದ ಮುಸ್ಲಿಂ ಮಹಿಳೆಗೆ ಕೇಳಲಾದ ಜೀವನಾಂಶ ಪ್ರಶ್ನೆಯು ಲಿಂಗಾಧಾರಿತ ಸಮಾನತೆಯದಾಗಿತ್ತು ಎಂಬುದು ಸ್ಪಷ್ಟವಾಗಿದೆ. ಮುಸ್ಲಿಂರನ್ನು ಹಿಂಸಾತ್ಮಕವಾಗಿ ತಮ್ಮ ಗುರಿಯನ್ನಾಗಿ ಮಾಡಿಕೊಂಡ ಹಿಂದೂ ಪಂಗಡಗಳಿಗೆ ಈ ಜೀವನಾಂಶ ಪ್ರಶ್ನೆಯು ಒಗ್ಗೂಡುವುದಕ್ಕೆ ಒಂದು ಮುಖ್ಯ ವಿಚಾರವಾಯಿತು. ಏಕೆಂದರೆ ಯಾವ ಸಮಾನ, ಜಾತ್ಯಾತೀತ, ರಾಷ್ಟ್ರೀಯ ಕಾನೂನುಗಳು ಮಹಿಳೆಯರಿಗೆ ಲಾಭದಾಯಕ/ಉಪಯುಕ್ತವಾಗಿ ಕಾಣಿಸಿಕೊಂಡವೋ ಅವುಗಳೇ ಕೋಮುವಾದಿಗಳ ಬೇಡಿಕೆ ಕೂಡಾ ಆಗಿ ಕಂಡುಬಂತು. ಮಧು ಕೀಶ್ವರ್ (1986) ಹೇಳಿದ ರೀತಿ ಸಮಾನ ನಾಗರಿಕ ಸಂಹಿತೆಯ ಬಗ್ಗೆಗಿನ ಬೇಡಿಕೆಯು ಹೆಂಗಸರ ಪರವಾಗಿರುವ ಬದಲು ಮುಸ್ಲಿಂರಿಗೆ ವಿರೋಧವಾದ ಬೇಡಿಕೆಯಾಗಿತ್ತು. ಮಹಿಳಾ ಚಳುವಳಿಯ ಕ್ರಿಯಾಶೀಲತೆ - ಅತ್ಯಾಚಾರ, ವರದಕ್ಷಿಣೆ, ಕೌಟುಂಬಿಕ ಹಿಂಸೆ ಮತ್ತು ಸತಿ ಇತ್ಯಾದಿಗಳ ಬಗ್ಗೆ ಕಾನೂನು ಸುಧಾರಣೆ ತರುವಲ್ಲಿ ಫಲಪ್ರದವಾದಾಗ್ಯೂ ಕೂಡಾ ಮಹಿಳೆಯರಿಗೆ ನ್ಯಾಯ ಸಿಗುವುದು ಕಷ್ಟ ಎನ್ನುವ ಅರಿವು ಈ ಸಂದರ್ಭದಲ್ಲಿ ತೀವ್ರವಾಗಿ ಬೆಳೆಯತೊಡಗಿತ್ತು. ಈ ಅಂಶಗಳಿಂದಾಗಿ ಕಾನೂನಿನ ಬಗ್ಗೆ ಮರು ಪರಿಶೀಲನೆಯನ್ನು ಕಾಳಜಿಯಿಂದ ಮಾಡುವಂತಹ ಜಾಗೃತಿ ಮೂಡತೊಡಗಿತ್ತು.

ಒಂದು ದಶಕದ ನಂತರದಲ್ಲಿ ಈ ರೀತಿಯ ಎಚ್ಚರಿಕೆಯ ದೃಷ್ಟಿಕೋನವು ಒಂದು ರೀತಿಯ ಅಸಹನೆಯನ್ನು ಹುಟ್ಟು ಹಾಕಿದೆ. ಸಮಸ್ಯೆಗಳ ಸಂಕೀರ್ಣತೆಯನ್ನು ನಿರ್ಲಕ್ಷಿಸಲಾಗುತ್ತಿದೆ, ಎಲ್ಲವನ್ನೂ ಮೀರಿ ಮಹಿಳೆಯರ ಸಮಸ್ಯೆಗಳನ್ನು ಮಾತ್ರ ನೋಡಲಾಗುತ್ತಿದೆ. ಕೆಲವು ಗುಂಪುಗಳಿಗೆ ಒಂದು ರೀತಿಯ ಉತ್ತರ ಸಿಕ್ಕಿಬಿಟ್ಟಿರುವ ಭರವಸೆ ಉಂಟಾಗುತ್ತಿದೆ..

ಸಮಾನ ನಾಗರಿಕ ಸಂಹಿತೆಯ ಕರಡು ಪ್ರತಿ ತಯಾರಿಸುವ ಹಂತವನ್ನು ಒಂದು 'ಉತ್ತರ'ವನ್ನಾಗಿ ನೋಡಲಾಗಿದೆ. ಸಮಯ, ಕಾನೂನು ರೂಪಿಸುವಿಕೆ ಹಾಗೂ ಸಮಾನ ನಾಗರಿಕ ಕಾನೂನುಗಳ ಜಾರಿಗೊಳಿಸುವಿಕೆ ಇಂತಹವುಗಳ ಬಗ್ಗೆ ಗುಂಪುಗಳಲ್ಲಿ ಭಿನ್ನಾಭಿಪ್ರಾಯಗಳಿದ್ದಾಗ್ಯೂ ಕೂಡಾ ಸಮಾನ ನಾಗರಿಕ ಸಂಹಿತೆಯ ಚರ್ಚೆಯಲ್ಲಿ ತೊಡಗಿಸಿಕೊಂಡ ಗುಂಪುಗಳೆಲ್ಲವೂ ಮಹಿಳಾ ಚಳುವಳಿಯು ತಮ್ಮ ಲಿಂಗಾಧಾರಿತ ಸಮಾನತೆಯನ್ನು ಪ್ರಭಾವಯುತವಾಗಿ ಹೇಳಬಲ್ಲಂತಹ 'ಉತ್ತಮ' ಕಾನೂನುಗಳಿಗಾಗಿ ದುಡಿಯಬೇಕೆಂಬ ಸಮಾನ ಅಭಿಪ್ರಾಯವನ್ನು ಹೊಂದಿದ್ದವು.

ದೆಹಲಿಯಲ್ಲಿ ಮಹಿಳಾ ಹಕ್ಕುಗಳ ಬಗ್ಗೆ ಕೆಲಸ ಮಾಡುವ ಸಂಸ್ಥೆಯು (W. G. W. R.) ಸಂಪೂರ್ಣ ಹೊಸದಾಗಿರುವ ರಾಷ್ಟ್ರೀಯ, ಜಾತ್ಯಾತೀತ ಕಾನೂನುಗಳನ್ನು ಮಾಡಬೇಕೆಂದು ಸೂಚಿಸಿತು. ಈ ಗುಂಪು 'ರಿವರ್ಸ್ ಆಪ್‌ಶನಾಲಿಟಿ'ಯನ್ನು ಎತ್ತಿ ಹಿಡಿಯಿತು. ಇದರ ಪ್ರಕಾರ ಮಹಿಳೆಯರಿಗೆ ಲಾಭದಾಯಕವಾಗಿದ್ದರೆ ಸಮಾನ ನಾಗರಿಕ ಸಂಹಿತೆಯಿಂದ ವೈಯಕ್ತಿಕ ಕಾನೂನುಗಳಿಗೆ ಹಿಂತಿರುಗುವ ಆಯ್ಕೆ. ಸ್ತ್ರೀವಾದಿಗಳು ಹಾಗೂ ಎಡಪಂಥೀಯ ಗುಂಪುಗಳಿಂದ ಈ ರೀತಿಯ ಹೊಸ ಕಾನೂನುಗಳು ರಚಿತವಾಗಬೇಕೆಂದು W.G.W.R.ನವರು ಎಣಿಸುತ್ತಾರೆ (1996). ಬಾಂಬೆಯ ಮಹಿಳಾ ಶೋಷಣೆಯ ವಿರುದ್ಧದ ಸಂಸ್ಥೆಯು ಮದುವೆ, ಸಾಮಾಜಿಕ ಭದ್ರತೆ, ಆಸ್ತಿ ಹಕ್ಕು ಇಂತಹ ಹಲವು ವಿಭಾಗಗಳಲ್ಲಿ ಹಲವು ಲಿಂಗಾಧಾರಿತ ಸಮಾನತೆಯ ನಿರ್ದಿಷ್ಟ ಕಾನೂನುಗಳನ್ನು ಸಲಹಿಸಿದೆ. ಹಿಂದುತ್ವ ಎತ್ತಿ ಹಿಡಿಯುವ ಸಂಸ್ಥೆಗಳು ರಾಷ್ಟ್ರೀಯ ಐಕ್ಯತೆಯ ಹೆಸರಿನಲ್ಲಿ ಸಮಾನ ನಾಗರಿಕ ಸಂಹಿತೆಯ ಬೇಡಿಕೆಯನ್ನಿಡುತ್ತಿರುವ ಸಂದರ್ಭದಲ್ಲಿ ಸ್ತ್ರೀವಾದಿಗಳು ಲಿಂಗಾಧಾರಿತ ಸಮಾನತೆಯ ಆಧಾರದ ಮೇಲೆ ಕಾನೂನುಗಳು ಬೇಕೆಂಬ ಬೇಡಿಕೆಯನ್ನು ಬಲವಾಗಿ ಇಡಬೇಕು ಎಂದು ಪ್ರತಿಪಾದಿಸುತ್ತಾರೆ (1995). ಮಾನವ ಹಕ್ಕುಗಳ ಸಮಿತಿಗಳಲ್ಲಿ ಒಂದಾದ ಮಾನವ ಹಕ್ಕುಗಳ ಕಾನೂನು ಸಮಿತಿಯು ಇತರೇ ಗುಂಪುಗಳ ಜೊತೆ ಸಮಾನ ನಾಗರೀಕ ಕಾನೂನುಗಳ ರೂಪಿಸುವಲ್ಲಿ ಸಹಕಾರಿಯಾಗಿ ಪಾಲುಗೊಳ್ಳುತ್ತಿದೆ.

ಆಲ್ ಇಂಡಿಯಾ ಡೆಮಾಕ್ರಟಿಕ್ ವಿಮೆನ್ಸ್ ಅಸೋಸಿಯೇಷನ್ (AIDWA) ಪ್ರಾರಂಭದಲ್ಲಿ ಸಮಾನ ನಾಗರೀಕ ಸಂಹಿತೆಯ ಪರವಾದ ನಿಲುವನ್ನು ತೆಗೆದುಕೊಂಡಿತ್ತು, ಆದರೆ 1995ರ ಸರಳಾ ಮುದಗೋಳ್ ಕೇಸ್‌ನ ನಂತರ ಸಮಾನ ನಾಗರಿಕ ಸಂಹಿತೆಯ ಬೇಡಿಕೆಯನ್ನು 'ಮೂಲಭೂತವಾದಿ' ಎಂದು ಹೆಸರಿಸಿ ವಿರೋಧಿಸತೊಡಗಿತು. ಈ ನಿಲುವು ಮಹಿಳಾ ಚಳುವಳಿಯಲ್ಲಿ ಮುಜುಗರದ ವಾತಾವರಣವನ್ನು ಸೃಷ್ಟಿ ಮಾಡಿತು. ಲಿಂಗ ಸಮಾನತೆಗಾಗಿ ಕೆಲವು ಕಾಯಿದೆಗಳಲ್ಲಿ ನಿರ್ದಿಷ್ಟ ಬದಲಾವಣೆಯನ್ನು ತರುವುದರ ಮೂಲಕ ಜಾತ್ಯಾತೀತ

ಶಕ್ತಿಗಳನ್ನು ಬಲಪಡಿಸಬಹುದೆಂದು AIDWA ವಾದಿಸಿತು. ಸಂವಿಧಾನಾತ್ಮಕವಾದ ಸಮಾನತೆಯ ಹಕ್ಕನ್ನು ಕಾಯಿದೆಗಳ ಜೊತೆಗೆ ತಳಕು ಹಾಕುವುದು ಅನಗತ್ಯವಾದುದು. ಜೊತೆಗೆ ಪ್ರಸ್ತುತ ಕಾನೂನಿನ ಚೌಕಟ್ಟಿನಲ್ಲಿ ಈ ಕಾಯಿದೆಗಳೂ ಸಹ ನಕಾರಾತ್ಮಕ ಪರಿಣಾಮವನ್ನು ಬೀರಬಲ್ಲವು.

ವಿವಾಹೇತರ ವಸತಿ, ಕೌಟುಂಬಿಕ ಹಿಂಸೆ ಇತ್ಯಾದಿಗಳ ಸ್ಪಷ್ಟ ಸಮಸ್ಯೆಗಳಲ್ಲಿ ಈಗಾಗಲೇ ಕಾನೂನಿನ ಪರವಾಗಿದ್ದ ಗುಂಪುಗಳು ಇಂದಿನ ಕೋಮುವಾದಿ ಸಂದರ್ಭ, ಹಾಗೂ ರಾಜ್ಯದ ಚಟುವಟಿಕೆಗಳಿಂದ ಈಗಾಗಲೇ ಮಹಿಳಾ ಚಳುವಳಿಗಿರುವ ಅನುಭವಗಳಿಂದಾಗಿ ಕಾನೂನುಗಳಲ್ಲಿ ಸುಧಾರಣೆಯ ಪ್ರಯತ್ನಗಳನ್ನೇ ಒಪ್ಪಲಿಲ್ಲ. ಉದಾಹರಣೆಗೆ ಬಾಂಬೆಯ ಮಜಲೀಸ್ ಕಾನೂನು ನೆರವಿನ ಮಹಿಳಾ ಸಂಸ್ಥೆಯು ಈ ಸಂದರ್ಭದಲ್ಲಿ ಸಮಾನ ನಾಗರಿಕ ಸಂಹಿತೆಯ ಕಾನೂನುಗಳನ್ನು ತರಬಾರದೆಂದು ಹೇಳಿದ್ದಲ್ಲದೇ ಧಾರ್ಮಿಕ ಸಮುದಾಯದೊಳಗೇ ಬದಲಾವಣೆ ತರುವ ಪ್ರಯತ್ನಗಳ ಪ್ರಾಮುಖ್ಯತೆಯನ್ನು ಒತ್ತಿ ಹೇಳಿತು. 'ಮಾನುಷಿ'ಯ ಮಧು ಕೀಶ್ವರ್‌ನಂತಹ ಕೆಲವು ವ್ಯಕ್ತಿಗಳು ಸಮಾನ ನಾಗರಿಕ ಸಂಹಿತೆಯನ್ನು ವಿರೋಧಿಸುತ್ತಾರೆ. ಸಮುದಾಯದಿಂದಲೇ ಬದಲಾವಣೆಯ ಪ್ರಯತ್ನಗಳು ನಡೆಯಬೇಕೆನ್ನುತ್ತಾರೆ. ವಿವಾಹ, ವಿಚ್ಛೇದನ, ಜೀವನಾಂಶ ಹಾಗೂ ವಂಶಾವಳಿಗಳಲ್ಲಿ ಸಮಾನ ನಾಗರಿಕ ಕಾನೂನುಗಳನ್ನು ಒತ್ತಾಯ ಪಡಿಸುವ ಹಲವು ಗುಂಪುಗಳ ಆತುರದ ಬಗ್ಗೆ ವಿಮೋಚನ (ಬೆಂಗಳೂರು) ಸಚೇತನ (ಅಹಮದಾಬಾದ್), ಅಸ್ಮಿತಾ (ಹೈದರಾಬಾದ್) ಅನ್ವೇಷಿ (ಹೈದರಾಬಾದ್) ಗುಂಪುಗಳು ತಮ್ಮ ಕಾಳಜಿಯನ್ನು ಆಗಿಂದಾಗ್ಗೆ ವ್ಯಕ್ತಪಡಿಸುತ್ತಿವೆ.

ಈ ಸಮಸ್ಯೆಗಳ ರಾಜಕೀಯ ವೈಶಿಷ್ಟ್ಯವನ್ನು ಮರು ಪರಿಶೀಲಿಸುವುದರ ಮೂಲಕ ನಾವು ನಮ್ಮ ನಿಲುವನ್ನು ಸ್ಪಷ್ಟ ಪಡಿಸುತ್ತಿದ್ದೇವೆ ಹಾಗೂ ಸಮಾನ ನಾಗರಿಕ ಸಂಹಿತೆಯ ಚರ್ಚೆಗೆ ಒಂದು ರೂಪ ಕೊಡಲು ಯತ್ನಿಸಿದ್ದೇವೆ. 'ಪ್ರಜಾಪ್ರಭುತ್ವ', 'ಸಮಾನತೆ', 'ಜಾತ್ಯಾತೀತತೆ' ಮತ್ತು 'ಆಧುನಿಕತೆ' ಈ ಅಂಶಗಳಿಂದ ಮಹಿಳಾ ಪ್ರಶ್ನೆಯನ್ನು ಪ್ರತ್ಯೇಕಿಸಿ ನೋಡುವುದು ಸಾಧ್ಯವಿಲ್ಲವೆಂದು ನಮಗೆನಿಸುತ್ತದೆ. ಇಂದು ಕಾಣಿಸಿಕೊಳ್ಳುತ್ತಿರುವ ಜಾತಿ ಹಾಗೂ ಧಾರ್ಮಿಕ ಸಮುದಾಯದ ಸಮಸ್ಯೆಗಳ ಜೊತೆಗೆ ತೊಡಗಿಸಿಕೊಂಡು ಕೆಲಸ ಮಾಡಲು ಮಹಿಳಾ ಚಳುವಳಿಯು ಹೊಸ ರೂಪದ ರಾಜಕೀಯವನ್ನೇ ಹುಟ್ಟು ಹಾಕಬೇಕಾಗುತ್ತದೆ. ಹಾಗಿಲ್ಲದಿದ್ದರೆ ಸ್ತ್ರೀವಾದಿ ಚಟುವಟಿಕೆಗಳು ಪ್ರಸ್ತುತದಲ್ಲಿರುವ ಜಾತಿ/ವರ್ಗ ಶ್ರೇಣಿಗಳನ್ನು ಹಾಗೂ ಮುಸ್ಲಿಂರನ್ನೂ 'ಗುರಿ'ಯಾಗಿಸಿಕೊಳ್ಳುವುದಕ್ಕೆ ಒಪ್ಪಿಗೆ ನೀಡಿದಂತಾಗುತ್ತದೆ. ಸುಲಭವಾಗಿ ಉತ್ತರಗಳು ಸಿಕ್ಕದಿದ್ದರೂ ನಾವು ರಾಜಕೀಯ ಹಾಗೂ ವೈಚಾರಿಕ ಅಂಶಗಳನ್ನು ಮಾತನಾಡಬೇಕಿದೆ. ಭಾರತೀಯ ಹೆಂಗಸರ ಶೋಚನೀಯ ಸ್ಥಿತಿ ಏಕರೂಪದ್ದು ಎನ್ನುವ ರೀತಿಯಲ್ಲಿ 'ಲಿಂಗಾಧಾರಿತ ಸಮಾನತೆ' ಗಾಗಿ ಬೇಡುವ ಬದಲು ವೈಚಾರಿಕ, ರಾಜಕೀಯದ ಅಡೆ-ತಡೆಗಳನ್ನು ಕುರಿತು ಮಾತನಾಡಬೇಕಿದೆ.

ಚಾರಿತ್ರಿಕವಾಗಿ ಭಾರತದಲ್ಲಿ ಹಾಗೂ ಪಾಶ್ಚಿಮಾತ್ಯ ದೇಶದಲ್ಲಿ ಮಹಿಳಾ ಚಳುವಳಿಗೆ 'ಭಿನ್ನತೆ ಹಾಗೂ ವೈವಿಧ್ಯತೆ' ಯನ್ನು ಒಪ್ಪಿಕೊಳ್ಳುವುದು ಕಷ್ಟಕರವಾದ ಸಂಗತಿಯಾಗಿದೆ. ಇದು ಮಹಿಳಾ ಚಳುವಳಿಯು 'ಸ್ತ್ರೀ ಶೋಷಣೆಯ'. ಮೂಲವನ್ನು ಗುರುತಿಸಿದ ರೀತಿಯನ್ನು ತೋರಿಸುತ್ತದೆ. ಸ್ತ್ರೀ ಶೋಷಣೆಯನ್ನು ಶಾರೀರಿಕ ರಚನೆಯ ವ್ಯತ್ಯಾಸದಿಂದಾಗಿ ಪಿತೃಪ್ರಧಾನತೆಯ ನೆಲೆಯಲ್ಲಿ ಗುರುತಿಸಲಾಯಿತು. ಈ ತಾತ್ವಿಕ ನೆಲೆಗಟ್ಟಿನ ಹಿನ್ನೆಲೆಯಲ್ಲಿ ಸ್ತ್ರೀತ್ವವನ್ನು ಸಾರ್ವಕಾಲಿಕಗೊಳಿಸಲಾಯಿತು. ಏಕರೂಪತೆ, ಸಹಜತೆ, ಅಚಲತೆಯ ಪರಿಧಿಯಲ್ಲಿ ಶಾರೀರಿಕ ಪರಿಕಲ್ಪನೆಯನ್ನು ಬಿತ್ತಲಾಯಿತು. ಕೇವಲ ಶಾರೀರಿಕ ವ್ಯತ್ಯಾಸ ದಿಂದ ಮಾತ್ರವಲ್ಲದೆ, ಸಾಂಸ್ಕೃತಿಕ ಭಿನ್ನತೆಯ ಕಾರಣದಿಂದ ಸ್ತ್ರೀ ಶೋಷಣೆ ನಡೆಯುತ್ತದೆ ಎಂಬ ಅಂಶವನ್ನು ಗಣನೆಗೆ ತೆಗೆದುಕೊಳ್ಳಲಿಲ್ಲ.

ಶಾರೀರಿಕ ವಿವರಣೆಗೆ ವಿರೋಧವಾಗಿರುವ ನಿಲುವೆಂದರೆ ಸ್ತ್ರೀತ್ವದ ಸಾಮಾಜಿಕ ಹಾಗೂ ಸಾಂಸ್ಕೃತಿಕ ವೈಶಿಷ್ಟತೆಗಳ ಮೇಲೆ ಬೆಳಕು ಚೆಲ್ಲಿರುವುದು. ಸಮುದಾಯ, ಜಾತಿ, ವರ್ಗದಂತ ವಿಭಾಗಗಳ ಮೇಲೆ ಲಿಂಗಾಧಾರಿತ ನಿಲುವು ಮೇಲುಗೈ ಸಾಧಿಸಿರುವುದು ಕಂಡುಬರುತ್ತದೆ. 'ಮಹಿಳೆ' ಸಾಮಾಜಿಕ ಅರ್ಥದಲ್ಲಿ ಜಾತಿ, ವರ್ಗ ಮೀರಿ ಒಂದು ಸಾಮಾನ್ಯತೆ ಹೊಂದಿದ್ದಾಳೆ. ಹಾಗಾಗಿ ದೇಹದ ಬಗ್ಗೆಗಿನ ಕಲ್ಪನೆ ಅ-ಐತಿಹಾಸಿಕ ಹಾಗೂ ಅ-ವೈಚಾರಿಕ ಎಂದು ಹೇಳಲಾಗುತ್ತದೆ. ಸಾಮಾಜಿಕ, ಸಾಂಸ್ಕೃತಿಕ - ಸ್ತ್ರೀತ್ವವು ಇತರ ಎಲ್ಲಾ ಅಸ್ತಿತ್ವ ಮೀರಿ ಲಿಂಗಾಧಾರಿತ ರಚನೆಯನ್ನು ಎತ್ತಿ ಹಿಡಿಯುತ್ತದೆ. ವಿರೋಧಾಭಾಸವೆಂದರೆ ಅದು ತಿರಸ್ಕರಿಸುವಂತಹ ಶಾರೀರಿಕ ರಚನೆಯ ಗ್ರಹಿಕೆಗೇ ಮತ್ತೆ ಹಿಂದಿರುಗುತ್ತದೆ. 'ಹೆಂಗಸು' - ಮಾಡಲ್ಪಟ್ಟಿದ್ದಾಳೆ, ಹುಟ್ಟಿಲ್ಲ ಎನ್ನುವವರೂ ಸಹ ದೈಹಿಕ ಅಸ್ತಿತ್ವವನ್ನು ಎತ್ತಿ ಹಿಡಿದಿರುವುದು ಕಂಡುಬರುತ್ತದೆ.

ಹೆಂಗಸಿನ - ಸತ್ವ ಹಿಡಿದಿಡುವ ಕೆಲಸ ಸ್ತ್ರೀವಾದಿಗಳಿಂದ ಸಾಕಷ್ಟಾಗಿದೆ. (essentialism) ಪ್ರಚಲಿತವಿರುವ ಪ್ರಸ್ತುತ ಸಂಕೀರ್ಣ ಚಾರಿತ್ರಿಕ ಹಂತದಲ್ಲಿ - ಇವರನ್ನು ಸುಲಭದ ರೀತಿಯಲ್ಲಿ ನಿರಾಕರಿಸುವುದಿಲ್ಲ. ಹಾಗಾಗಿ ಯಾರು essentialism ಟೀಕೆ ಮಾಡುತ್ತಾರೋ ಅಂತಹವರೂ ಅದರ ಹತ್ತಿರದಲ್ಲಿಯೇ ತಿರುಗುತ್ತಿರುತ್ತಾರೆ. ಸಾಮಾನ್ಯ ಪ್ರಜ್ಞೆಗೆ ಹತ್ತಿರವಾಗುವ ಎರಡು ಸಾಂಸ್ಕೃತಿಕ ವಾದಗಳು ಶಾರೀರಿಕ ವಿವರಣೆ

ಹಾಗೂ ಭಿನ್ನತೆಗಳು ಮಹಿಳಾ ಸಮಸ್ಯೆಗಳ ಮೂಲ ಬೇರುಗಳು ಎಂದು ವಿಶ್ಲೇಷಿಸುತ್ತವೆ. ಇದರರ್ಥ ವರ್ಗ, ಜಾತಿ, ಮತ್ತು ಸಮುದಾಯ ಸ್ಪರ್ಶದ ರೀತಿ 'ಹೆಂಗಸನ್ನು ಆಗಿಸುವುದಕ್ಕೆ ಕೊಡುಗೆ ನೀಡಿರುತ್ತವೆ. ಒಂದು ವಾದವೆಂದರೆ ಸಂದರ್ಭ ಅಥವಾ ಶಾರೀರಿಕತೆಗೆ ಅಂಟಿಕೊಂಡಿರುವ ಸಾಂಸ್ಕೃತಿಕ ಅರ್ಥಗಳಾಚೆಗೂ ಬೇರೆ ಬೇರೆ ಹಂತಗಳಲ್ಲಿ ಹೆಂಗಸರಾಗಿ ಎಲ್ಲಾ ಸಂಸ್ಕೃತಿಯಲ್ಲೂ ಶೋಷಿತ ರಾಗಿದ್ದಾರೆ. ಇನ್ನೊಂದು ವಾದವೆಂದರೆ ಬಂಡವಾಳಶಾಹಿ ಸಂಸ್ಕೃತಿ ಪ್ರಪಂಚದಾದ್ಯಂತ ಹರಡುತ್ತಿರುವಾಗ ವಿಭಿನ್ನ ರಾಜಕೀಯ-ಸಾಂಸ್ಕೃತಿಕ ಸಂದರ್ಭಗಳು ಒಂದೇ ರೀತಿಯಲ್ಲಿ ಪ್ರತಿನಿಧಿ ಸಲ್ಪಡುತ್ತಿವೆ. ಹಾಗಾಗಿ ಹೆಂಗಸರ ಬದುಕು ಸಾಂಸ್ಕೃತಿಕ ಹರವುಗಳನ್ನು ಉಳಿಸಿಕೊಳ್ಳುವುದಿಲ್ಲ.

ಈ ವಾದಗಳ ತಾತ್ವಿಕತೆ ಎಷ್ಟು ಶಕ್ತಿಯುತವೆಂದರೆ ಹೆಂಗಸರಿಗೆ ಏಕ ಹಾಗೂ ಸಾರ್ವತ್ರಿಕವಾಗಿರುವ ಕಾನೂನುಗಳು ಬೇಕೆಂದು ನಾವು ನಿರ್ಧಾರಕ್ಕೆ ಬರಬೇಕಾಗುತ್ತದೆ. 'ಮಹಿಳೆ'ಯ ಬಗ್ಗೆಗಿನ ಅಂಶ/ಪರಿಕಲ್ಪನೆ ಜಾಗತಿಕ ಹಂತದ ಮಹಿಳಾ ಪ್ರಶ್ನೆಯೊಡನೆ ಸೇರಿಕೊಂಡು ಬಿಟ್ಟಿದೆ. ಇತ್ತೀಚಿನ ಅಂತರ ರಾಷ್ಟ್ರೀಯ ಸಭೆಗಳೂ ಕೂಡಾ ಕೈರೋ (1994), ವಿಯನ್ನಾ (1994), ಬೀಜಿಂಗ್ (1995) ಮಾನವ ಹಕ್ಕುಗಳ ಹಾಗೂ ಮಹಿಳಾ ಹಕ್ಕುಗಳ ಸಮಸ್ಯೆಗಳ ಮೇಲೆಯೇ ಬೆಳಕು ಚೆಲ್ಲಿವೆ. ಈ ರೀತಿಯ ಕಾಳಜಿಗಳು ಜಾಗತಿಕವಾಗಿ ಇರುವುದರಿಂದ ಮಹಿಳಾ ಮತ್ತು ಮಾನವ ಹಕ್ಕುಗಳ ಸಮಿತಿಯು ಸ್ಥಳೀಯ ಹೋರಾಟಗಳಿಗೆ ಗಣನೀಯ ಒಪ್ಪಿಗೆ (Credibility) ಒದಗಿಸುತ್ತದೆ. ಈ ರೀತಿಯ ಅಂತರ್‌ರಾಷ್ಟ್ರೀಯ ಪ್ರಯತ್ನಗಳು ವಿರೋಧಾತ್ಮಕ ಪ್ರಭಾವವನ್ನು ಬೀರುತ್ತವೆ. ಜಾಗತಿಕ ಅಭಿವ್ಯಕ್ತಿಗಳ ಏಕರೂಪಗೊಳಿಸುವಿಕೆ ಯಿಂದಾಗಿ ಸ್ಥಳೀಯತೆಯ ವಿಶಿಷ್ಟತೆ/ಸಮಸ್ಯೆಗಳ ಸ್ವರೂಪ ಮರೆಮಾಚಿ ಹೋಗಲ್ಪಡುತ್ತಿವೆ. ಜಾಗತೀಕರಣಗೊಂಡ ಮಹಿಳಾ ಹಕ್ಕುಗಳಿಂದಾಗಿ ನ್ಯಾಯದ ಪರಿಕಲ್ಪನೆ ಚಲನರಹಿತ ಹಾಗೂ ಏಕರೂಪದ್ದಾಗಿದೆ. ಜೊತೆಗೆ ಹೆಂಗಸನ್ನು ಸಾರ್ವತ್ರಿಕ ವರ್ಗ ಎಂದು ಪರಿಗಣಿಸಲಾಗುತ್ತಿದೆ.

ಸಾರ್ವತ್ರಿಕವಾಗಿ ಮಹಿಳೆಯರು ಎದುರಿಸುವ ತಾರತಮ್ಯಗಳ ಕಡೆ ವಿಶೇಷ ಗಮನ ನೀಡುವ ಈ ಅಭಿವ್ಯಕ್ತಿಗಳು ಮಹಿಳಾ ಚಳುವಳಿಯು ಏಕತೆ ಕಾಯ್ದುಕೊಳ್ಳುವ ಅಗತ್ಯ ಹೇಳುತ್ತವೆ. ಏಕತೆ ಮಹಿಳಾ ಚಳುವಳಿಯನ್ನು ಬಲಗೊಳಿಸಬಹುದಾಗಿದ್ದಾಗ್ಯೂ ಕೂಡಾ ಇಂದಿನ ಭಾರತದ ಸಂದರ್ಭದಲ್ಲಿ ನಾವು ಇದನ್ನು ಮರು ಪರಿಶೀಲಿಸಬೇಕಾಗಿದೆ. ನಾವು ಲಿಂಗಾಧಾರತೆಯನ್ನು ಏಕರೂಪವಾಗಿ ನೋಡುವುದು ಸಾಧ್ಯವಿಲ್ಲವೆನ್ನುವಾಗ ನಮ್ಮ ಉದ್ದೇಶ ಮಹಿಳಾ ಚಳುವಳಿಯನ್ನು ಹೀಗಳೆಯುವುದಿಲ್ಲ. ಬದಲಾಗಿ ಲಿಂಗಾಧಾರಿತ ಪರಿಕಲ್ಪನೆಯನ್ನು ಮತ್ತೆ ವೈಚಾರಿಕತೆಗೆ ಒಳಪಡಿಸುವುದಾಗಿದೆ. ನಾವು ಮೊದಲು ಶಾರೀರಿಕ ನಂತರ ಸಾಂಸ್ಕೃತಿಕ/ಸಾಮಾಜಿಕ ಶೋಷಣೆ ಎನ್ನುವುದರ ಬದಲಾಗಿ ಲಿಂಗಾಧಾರಿತ ಶೋಷಣೆಯನ್ನು ಜಾತಿ ಹಾಗೂ ಸಮುದಾಯ ಶೋಷಣೆಗಳಂತೆಯೇ ಪರಿಗಣಿಸುತ್ತೇವೆ. ಲಿಂಗಾಧಾರಿತ ಪರಿಕಲ್ಪನೆಯನ್ನು ಶಾರೀರಿಕತೆಯಿಂದ ದೂರ ಮಾಡಿ ಸಾಮಾಜಿಕ ಅರ್ಥದಿಂದಲೇ ಮರು ವಿಚಾರ ಮಾಡಬಹುದು. 'ಹೆಂಗಸರೂ' ಒಂದು ನಿರ್ದಿಷ್ಟ ಜಾತಿ, ವರ್ಗ, ಸಮುದಾಯಕ್ಕೆ ಸೇರಿದ್ದಾರೆ ಎನ್ನುವ ದೃಷ್ಟಿಕೋನವು ಪಂಗಡಗಳ ಮಧ್ಯೆ ಇರುವ ಭಿನ್ನತೆಗಳನ್ನು ಹೇಳುವುದಿಲ್ಲ ಹಾಗೂ ಅವು ನಿತ್ಯ ಜೀವನ ದಲ್ಲಿರುವ ಲಿಂಗಾಧಾರಿತ ಸಮಸ್ಯೆಗಳನ್ನು ಅರ್ಥ ಮಾಡಿ ಕೊಳ್ಳುವಲ್ಲಿಯೂ ಸಹ ಸಹಕಾರಿಯಾಗುವುದಿಲ್ಲ.

ಏಕತೆಯ ಬಗ್ಗೆಗಿನ ತಮ್ಮ ಗ್ರಹಿಕೆಯಿಂದಾಗಿ ಮಹಿಳಾ ಚಳುವಳಿಯಲ್ಲಿರುವ ಹಲವರು ಶಾರೀರಿಕ ಅಸ್ತಿತ್ವದ ಹೊರತು ಇತರ ಅಸ್ತಿತ್ವದ ಪ್ರಶ್ನೆಯನ್ನು ಎತ್ತಿದಾಗ ಆ ಪ್ರಯತ್ನವನ್ನು ವಿನಾಶಕಾರಕ ಎಂದು ಬಗೆಯುತ್ತಾರೆ. ಲಿಂಗಾಧಾರಿತ ನ್ಯಾಯ ಎಂದು ಹೇಳುವವರ ಬಗ್ಗೆ ಈ ಮಾತು ಬರೆಯುತ್ತಿದ್ದೇವೆ. ಈ ಭಿನ್ನಾಭಿಪ್ರಾಯಗಳನ್ನು ಸಕಾರಾತ್ಮಕವಾಗಿ ನಾವು ತೆಗೆದು ಕೊಳ್ಳಬೇಕಾಗುತ್ತದೆ. ಏಕೆಂದರೆ ಇದರಿಂದ ಹೆಂಗಸರು ವಿವಿಧ ಬಗೆಯಲ್ಲಿ ಹೇಗೆ ರೂಪುಗೊಂಡಿದ್ದಾರೆ ಎಂಬುದನ್ನು ಅರ್ಥೈಸಿ ಕೊಳ್ಳಲು ಸಾಧ್ಯವಾಗುತ್ತದೆ. ವಿಭಿನ್ನ ರೀತಿಯ ಅಸ್ತಿತ್ವಗಳು ವಿಭಿನ್ನ ಬಗ್ಗೆಯ ನ್ಯಾಯಗಳನ್ನು ಹುಟ್ಟು ಹಾಕಿವೆ. ಈ ವಿಭಿನ್ನ ಬಗೆಯ ನ್ಯಾಯಗಳನ್ನು ಮಹಿಳಾ ಚಳುವಳಿಯು ಕೆಲಸ ಮಾಡುವ ಒಂದೇ ನ್ಯಾಯದ ಪರಿಕಲ್ಪನೆಯಿಂದ ಸಮೀಕರಿಸುವುದಕ್ಕೆ ಸಾಧ್ಯವಾಗುವುದಿಲ್ಲ.

ವಿವಿಧ ನ್ಯಾಯದ ಕಲ್ಪನೆಗಳು ಅಥವಾ ಅವುಗಳನ್ನು ತಲುಪುವ ಬಗೆ ರಾಜಕೀಯ ಗೊಂದಲಕ್ಕೆ ಅಥವಾ ವೈವಿಧ್ಯತೆಯ ನಿಷ್ಕ್ರಿಯತೆಗೆ ದಾರಿ ಮಾಡಿಕೊಡುತ್ತದೆ ಎಂಬ ಆತಂಕಗಳಿಗೆ ವಿರೋಧವಾಗಿ ವಿಭಿನ್ನತೆಯನ್ನು ಎತ್ತಿ ಹಿಡಿಯುವ ಪ್ರಯತ್ನಗಳು ಸಮಾಜದ ಎಲ್ಲಾ ಪಂಗಡಗಳ ನ್ಯಾಯಯುತ ಬೇಡಿಕೆಗೆ ಹೆಚ್ಚು ಎಚ್ಚರಿಕೆ ಹಾಗೂ ಸೂಕ್ಷ್ಮಜ್ಞರಾಗುವ ಪ್ರಕ್ರಿಯೆ ಹುಟ್ಟು ಹಾಕುತ್ತದೆ. ಇಂದು ನಾವು ಲಿಂಗಾಧಾರಿತ ಸಮಾನತೆಯ ಹೆಸರಿನಲ್ಲಿ ಏನನ್ನು ಕೇಳುತ್ತಿದ್ದೇವೆ, ಅದು ಏನಾಗುತ್ತದೆ ಎಂಬುದನ್ನು ನಾವು ಜಾಗರೂಕತೆಯಿಂದ ಶೋಧಿಸಬೇಕಾಗಿದೆ. ಕಷ್ಟ ಸಾಧ್ಯವಾದರೂ ಇಂದು ನಾವು 'ಜಾತ್ಯಾತೀತತೆ' ಹಾಗೂ 'ಹಕ್ಕುಗಳು' ಇವುಗಳ ಪರಿಕಲ್ಪನೆಯನ್ನು ಪ್ರಶ್ನಿಸಬೇಕಾಗುತ್ತದೆ. ಒಂದು ಕಾಲಕ್ಕೆ ಈ ಪರಿಕಲ್ಪನೆಗಳು ಮಹಿಳಾ ವಿಮೋಚನೆಯನ್ನು ಸಾಧಿಸುವ ಆಶಯವಾಗಿದ್ದವು. ಈಗಿರುವ ಮಹಿಳಾ ಚಳುವಳಿಯ ಬಿಕ್ಕಟ್ಟಿನ ಸಂದರ್ಭದಲ್ಲಿ ಈ ಪರಿಕಲ್ಪನೆಗಳ ಬಗ್ಗೆಗಿನ ಟೀಕಾತ್ಮಕ

ಮರು ವಿಮರ್ಶೆ - ಸಮಾನ ನಾಗರಿಕ ಸಂಹಿತೆಯ ಚರ್ಚೆಯು ಒಡ್ಡಿರುವ ಬಿಕ್ಕಟ್ಟಿನಿಂದ ಈಚೆ ಬರುವುದಕ್ಕೆ ದಾರಿಯಾಗ ಬಹುದು.

ಕಳೆದ ಕೆಲವು ದಶಕಗಳಲ್ಲಿ ಹುಟ್ಟಿದ ರಾಜಕೀಯ ಹಾಗೂ ಸಾಮಾಜಿಕ ಚಳುವಳಿಗಳು ಅದರಲ್ಲೂ ವಿಶೇಷವಾಗಿ ದಲಿತ ಚಳುವಳಿ ಹಲವಾರು ಪ್ರಶ್ನೆಗಳನ್ನು ಸ್ತ್ರೀವಾದದ ಮುಂದಿಟ್ಟಿದೆ. ಈ ಪ್ರಶ್ನೆಗಳು ಮಹಿಳಾ ಚಳುವಳಿ ವ್ಯಕ್ತಪಡಿಸುತ್ತಾ ಬಂದಿರುವ ಐಕ್ಯತೆಗೆ ಸಂಬಂಧಪಟ್ಟಿದೆ.

ಸ್ತ್ರೀವಾದವು ತನ್ನ ವಿಶ್ಲೇಷಣೆಗೆ ದಕ್ಕೆಯಾಗದ ರೀತಿಯಲ್ಲಿ ಜಾತಿ ಹಾಗೂ ಜನಾಂಗದ ರಾಜಕೀಯ ಆಯಾಮವನ್ನು ಮೊಂಡುಗೊಳಿಸಿ ತನ್ನ ಕಕ್ಷೆಯಲ್ಲಿ ಸೇರಿಸಿಕೊಂಡಿದೆ. ಅಲ್ಪ ಸಂಖ್ಯಾತರನ್ನು ನೋಯಿಸದ, ಟೀಕಿಸದ, ಅವರನ್ನು ಅವರಷ್ಟಕ್ಕೆ ಬಿಡುವ ನಿಲುವು ಸ್ತ್ರೀವಾದಿಗಳಲ್ಲಿ ಕಂಡುಬರುತ್ತದೆ.

ಈ ಮಾದರಿಯ 'Co-Option' ಮಹಿಳಾ ಸಮಸ್ಯೆಗಳು ಮುಖ್ಯವಾಹಿನಿಯ ಕಾರ್ಯಕ್ರಮದ ಪಟ್ಟಿಯಲ್ಲಿ ಆದ್ಯತೆಯನ್ನು ಪಡೆಯುತ್ತಿರುವುದನ್ನು ನೆನಪಿಸುತ್ತದೆ. ಇದು ಲಿಂಗ ಸಮಾನತೆ, ಲಿಂಗ ರಾಜಕೀಯಗಳು ಮಹಿಳಾ ಅಭಿವೃದ್ಧಿ, ಮಹಿಳಾ ಅಧ್ಯಯನದಂತಹ ಬಹುಮುಖ್ಯ ಯೋಜನಾ ನಿರ್ಣಯಗಳ ಬಾಲಂಗೋಸಿಗಳಾಗುತ್ತಿವೆ. ಇಂದು ಮಹಿಳಾ ಚಳುವಳಿಯ ಪ್ರಭಾವ 'ರಾಜಕೀಯ ವಿಶ್ಲೇಷಣೆಯ' ಬದಲಾಗಿ 'ಯೋಜನೆ ಹಾಗೂ ಆಡಳಿತ'ದಲ್ಲಿ ಕಂಡು ಬರುತ್ತಿದೆ. ಲಿಂಗ, ಜಾತಿ, ವರ್ಗ ಎಲ್ಲವನ್ನೂ ಮೀರಿ ಪುರುಷ ಹಾಗೂ ಮಹಿಳೆಯರೆಲ್ಲರೂ ಮನುಷ್ಯರಾಗಿರುವುದರಿಂದ "ಮೂಲಭೂತವಾದ ಬದಲಾವಣೆ" ಯನ್ನು ಈ ವಾದ ಬಯಸುವುದಿಲ್ಲ. ಈ ಹಿನ್ನೆಲೆಯಲ್ಲಿ 'ಅಭಿವೃದ್ಧಿ'ಯ ದೃಷ್ಟಿಕೋನದಲ್ಲಿ ಭಿನ್ನತೆ ಅಗತ್ಯವಿಲ್ಲವೆಂದು ಭಾವಿಸಲಾಗುತ್ತದೆ. ಹೀಗಾಗಿಯೇ ಮಹಿಳಾ ಚಳುವಳಿಯನ್ನು ಆಕ್ರಮಶೀಲ, ವಿಭಜಿಸುವ, ಒತ್ತಡ ಹೇರುವ ಗುಂಪೆಂದು ಪರಿಗಣಿಸಲಾಗುತ್ತಿದೆ.

ದಲಿತ ಚಳುವಳಿ ಹಾಗೂ ಮುಸ್ಲಿಂ ಗುಂಪುಗಳು ಎತ್ತಿರುವ ಪ್ರಶ್ನೆಗಳನ್ನು ಕುರಿತು ಮಹಿಳಾ ಚಳುವಳಿ ಸ್ವವಿಮರ್ಶೆಯನ್ನು ಮಾಡದಿದ್ದರೆ, ಚಳುವಳಿ ಹೊಂದಿರುವ ಕಾಳಜಿಯನ್ನು ನಕಾರಾತ್ಮಕವಾಗಿ ಲೇಬಲ್ ಮಾಡುವ ಸಾಧ್ಯತೆ ಇದೆ. ಮಹಿಳಾ ಚಳುವಳಿಯ ಈ ಕಾಳಜಿಯನ್ನು ಮಹಿಳಾ ಚಳುವಳಿಯ ಪರವಾದ ಆದರೆ ಅದರ ರಾಜಕೀಯದ ಬಗ್ಗೆ ಅತೃಪ್ತಿಯನ್ನು ವ್ಯಕ್ತಪಡಿಸುವ ಧೋರಣೆಗೆ ಹೋಲಿಸಬಹುದು. ಈ ಗುಂಪು ಮಹಿಳಾ ಚಳುವಳಿಯ ಬೇಡಿಕೆಯನ್ನು ಒಂದು ಹಂತದವರೆಗೆ ಒಪ್ಪಿಕೊಳ್ಳುತ್ತದೆ. ಪ್ರಸ್ತುತದಲ್ಲಿರುವ ಸವಲತ್ತುಗಳನ್ನು ರಕ್ಷಿಸುವ ವ್ಯವಸ್ಥೆಗೆ ಪೆಟ್ಟು ಬೀಳುವ ಭಯವಿದ್ದಾಗ ಅಂತ ಬೇಡಿಕೆಗಳನ್ನು ಅದು ನಿರಾಕರಿಸುತ್ತದೆ. ನಗರ ಪ್ರದೇಶ, ಹಿಂದೂ, ಮೇಲುಜಾತಿಯ ವರ್ಗದ ಮಹಿಳೆಯರಿಂದ ಕೂಡಿದ ಮಹಿಳಾ ಚಳುವಳಿಯು ಮುಸ್ಲಿಂ ಹಾಗೂ ದಲಿತ ಮಹಿಳೆಯರಿಗೆ ಅವಕಾಶವನ್ನು ಕಲ್ಪಿಸಿ ಕೊಡುವುದರ ಮೂಲಕ ತನ್ನ ಕಾಳಜಿಯನ್ನು ವ್ಯಕ್ತಪಡಿಸುತ್ತದೆ. 'ದಲಿತ' ಅಥವಾ 'ಮುಸ್ಲಿಂ' ಅಸ್ತಿತ್ವಕ್ಕಿಂತ 'ಮಹಿಳೆ'ಯೆಂಬ ಅಸ್ತಿತ್ವಕ್ಕೆ ಪ್ರಾಧಾನ್ಯತೆ ನೀಡಲಾಗುತ್ತದೆ.

### ಸಮಾನ ನಾಗರೀಕ ಸಂಹಿತೆಯ ರಾಜಕೀಯ ಸ್ವರೂಪ

ಮಹಿಳೆಯರ ಮೇಲೆ ನಡೆಯುತ್ತಿರುವ ಬಹುತೇಕ ಅನ್ಯಾಯ ಅತ್ಯಾಚಾರದ ಪ್ರಕರಣಗಳು 'ನ್ಯಾಯಾಂಗದ ಚೌಕಟ್ಟಿನಲ್ಲಿ' ಪರಿಹಾರ ಕಂಡುಕೊಳ್ಳುತ್ತಿವೆ. ನ್ಯಾಯಾಂಗ ವ್ಯವಸ್ಥೆ "ಸ್ತ್ರೀಯರು" "ನ್ಯಾಯ"ಪಡೆಯುವ ಮುಖ್ಯ ವೇದಿಕೆಯಾಗಿದೆ. ಮಹಿಳೆಯರ ವಿಭಿನ್ನ ಸಮಸ್ಯೆಗಳು ಕಾನೂನಿನ ಮೂಲಕ ಪರಿಹಾರ ಕಂಡುಕೊಳ್ಳುವ ಪ್ರಯತ್ನಕ್ಕೆ ಹೆಚ್ಚು ಒತ್ತು ಕೊಡಲಾಗುತ್ತಿದೆ.

ಲಿಂಗ ಸಮಾನತೆಯನ್ನು ಎತ್ತಿ ಹಿಡಿಯುವ, ಮಹಿಳೆಯರಿಗೆ ನ್ಯಾಯ ನೀಡುವ ಪ್ರಕ್ರಿಯೆಯನ್ನು ಕೆಲವು ಬಹುಮುಖ್ಯ ಚರಿತ್ರಾರ್ಹ ತೀರ್ಪುಗಳಲ್ಲಿ ಗುರುತಿಸಬಹುದು. 1985ರ ಶಾಬಾನು ಪ್ರಕರಣ, 1994ತಲಾಖ್ ಪ್ರಕರಣ, ಹಾಗೂ 1995 ಸರಳಾ ಮುದ್‌ಗೋಳ ಪ್ರಕರಣಗಳಲ್ಲಿ ನ್ಯಾಯಾಂಗ ಸ್ತ್ರೀಯರ ಪರವಾದ ನಿಲುವನ್ನು ತೆಗೆದುಕೊಂಡಿರುವುದನ್ನು ಗುರುತಿಸ ಬಹುದು.

ಸಮಾನ ನಾಗರೀಕ ಸಂಹಿತೆಯ ಬಗೆಗಿನ ಚರ್ಚೆಗಳು ಮೂಲಭೂತವಾಗಿ ರಾಜಕೀಯ ಸ್ವರೂಪದ ಪ್ರಶ್ನೆಗಳು. ಸಮಾನ ನಾಗರೀಕ ಸಂಹಿತೆಯ ಸಂದರ್ಭದಲ್ಲಿ, ಪೌರತ್ವ, ಜಾತ್ಯಾತೀತತೆ, ಆಧುನಿಕತೆ, ಜನಾಂಗ, ಅಸ್ತಿತ್ವ, ಮಹಿಳಾ ಚಳುವಳಿ ಮುಂತಾದ ಪರಿಕಲ್ಪನೆಗಳ ಹೊಸ ಅರ್ಥವನ್ನು ಹುಡುಕುವಂತಾಗಿದೆ. ಕೇವಲ ಲಿಂಗ ಸಮಾನತೆಯ ದೃಷ್ಟಿಯಿಂದ ಮಾತ್ರವಲ್ಲದೆ, ವರ್ಗ, ಜಾತಿ, ಪ್ರಜಾತಂತ್ರದ ದೃಷ್ಟಿಯಿಂದಲೂ ಈ ಪರಿಕಲ್ಪನೆಗಳು ಇಂದಿಗೂ ಪ್ರಸಕ್ತವಾಗಿವೆ.

ಕಾನೂನು ವ್ಯವಸ್ಥೆಯ ಹಿಂದಿರುವ ಶಕ್ತಿಗಳು, ನ್ಯಾಯಾಂಗದ ಪ್ರಾಧಾನ್ಯತೆಯನ್ನು ಎತ್ತಿ ಹಿಡಿಯುತ್ತವೆ. ಕೆಲವು ಸ್ತ್ರೀವಾದಿಗಳು ತೀರ್ಪುಗಳು ಮುಸ್ಲಿಂ ವಿರೋಧಿ ಧೋರಣೆಯನ್ನು ಪ್ರತಿಬಿಂಬಿಸುತ್ತಿವೆಯೆಂದು ಟೀಕಿಸಿದ್ದರೂ ಮಹಿಳೆಯರ ಸಮಸ್ಯೆಗಳಿಗೆ ಕಾನೂನಿನ ಚೌಕಟ್ಟಿನೊಳಗೆ ಪರಿಹಾರ ದೊರೆಯುತ್ತದೆಯೆಂದು ಒಪ್ಪಿಕೊಂಡಿರುತ್ತಾರೆ. ನ್ಯಾಯಾಂಗ ಸಮರ್ಪಕವಾಗಿ ಕೆಲಸ ಮಾಡುವುದು ಹಾಗೂ ಮಹಿಳೆಯರ ಸಮಸ್ಯೆಗೆ ಪರಿಹಾರ ದೊರಕಿಸುವುದಕ್ಕೂ ಸಂಬಂಧವಿದೆಯೆಂದು ಸಹ ಒಪ್ಪಿಕೊಳ್ಳಲಾಗುತ್ತಿದೆ. ಇಂತಹ ವಾದಗಳು ಕಾನೂನು

ವ್ಯವಸ್ಥೆಯನ್ನು ಇತರ ಸಾಮಾಜಿಕ ಸಂಸ್ಥೆಗಳಿಂದ ಬೇರ್ಪಡಿಸುತ್ತವೆ. ಲಿಂಗ ಸಮಾನತೆಯ ನ್ಯಾಯಕ್ಕಾಗಿ ಕೇಳುವ ಕಾನೂನುಗಳು ಇತರ ಸಾಮಾಜಿಕ ಸಾಂಸ್ಕೃತಿಕ ಅಂಶಗಳನ್ನು ಅಲಕ್ಷಿಸುತ್ತವೆ. ಒಂದಕ್ಕೊಂದು ತಳುಕು ಹಾಕಿಕೊಂಡಿರುವ ವಿಭಿನ್ನ ಅಂಶಗಳನ್ನು ಸರಳೀಕರಿಸಿದಂತಾಗುತ್ತದೆ. ಸಮಾನ ನಾಗರೀಕ ಸಂಹಿತೆಗೆ ಸಂಬಂಧಪಟ್ಟ ಇತರ ಎಲ್ಲಾ ಅಂಶಗಳನ್ನು ಬದಿಗೊತ್ತಿ 'ಕಾನೂನಿನ' ಒಂದೇ ಪ್ರಶ್ನೆ ಪ್ರಧಾನವಾಗಿದೆ. ಸಮಾನ ನಾಗರೀಕ ಸಂಹಿತೆಯ ವಿವಾದದಿಂದಾಗಿ ಅನೇಕ ರಾಜಕೀಯ ಪ್ರಶ್ನೆಗಳನ್ನು ಇಂದು ಮಹಿಳಾ ಚಳುವಳಿ ಎದುರಿಸಬೇಕಾದ ಸಂಕೀರ್ಣ ಸ್ಥಿತಿಯಲ್ಲಿದೆ. ಸಮಾನ ನಾಗರೀಕ ಸಂಹಿತೆಯ ಬೇಡಿಕೆ ಎರಡು ಆಯ್ಕೆಗಳನ್ನು ಮಹಿಳಾ ಚಳುವಳಿಯ ಮುಂದಿಟ್ಟಿದೆ. ಹಲವಾರು ವರ್ಷಗಳಿಂದ ಲಿಂಗ ಸಮಾನತೆಗಾಗಿ ಹೋರಾಡುತ್ತಿರುವ ಸ್ತ್ರೀವಾದಿಗಳು, ಭಾರತದ ಎಲ್ಲಾ ಮಹಿಳೆಯರಿಗೆ ಅನ್ವಯ ವಾಗುವ ಕಾಯಿದೆಯನ್ನು ಜಾರಿಗೆ ತರುವುದು ಜೊತೆಗೆ ಈ ಕಾಯಿದೆಯ ಕರಡು ಪ್ರತಿಯು ಜಾತ್ಯಾತೀತ ಸ್ತ್ರೀವಾದಿಗಳಿಂದ ರಚಿತವಾಗಬೇಕೇ ವಿನಃ ಮತೀಯ ಶಕ್ತಿಗಳ ಪ್ರತಿನಿಧಿಗಳಾದ ಬಿ.ಜೆ.ಪಿ.ಯವರಿಂದಲ್ಲವೆಂದು ವಾದಿಸುತ್ತಾರೆ.

ಸಮಾನ ನಾಗರೀಕ ಸಂಹಿತೆಯ ಬಗ್ಗೆಯೇ ಹಲವಾರು ಪ್ರಶ್ನೆಗಳಿರುವಾಗ ಹೊಸ ಕಾನೂನುಗಳನ್ನು ಕೇಳುವುದಕ್ಕೆ ಕಾಲ ಪಕ್ವವಾಗಿಲ್ಲ. ಹಾಗೂ, ಅಲ್ಪ ಸಂಖ್ಯಾತರ ಹಾಗೂ ದಲಿತ ಚಳುವಳಿಗಳು ಎತ್ತಿರುವ ಪ್ರಶ್ನೆಗಳನ್ನು ಇದು ಪರಿಗಣಿಸದೆ, ಮೇಲು ಜಾತಿಯ ಹಿಂದು ದೋರಣೆಗಳನ್ನು ಪ್ರತಿಬಿಂಬಿಸುತ್ತದೆ. ಜಾತ್ಯಾತೀತತೆ, ಜಾತಿಯ ಪೌರತ್ವ ಮುಂತಾದ ರಾಜಕೀಯ ಹಾಗೂ ನ್ಯಾಯಾಂಗ ಕಲ್ಪನೆಗಳ ಸಂಕೀರ್ಣತೆಯನ್ನು ಗುರುತಿಸಲು ವಿಫಲವಾಗಿದೆ.

ಕಾನೂನುಗಳು ಸರಳವಾಗಿ ಲಿಂಗ ಸಮಾನತೆಯ ಪರಿಕಲ್ಪನೆಯನ್ನು ತಮ್ಮ ತೆಕ್ಕೆಯಲ್ಲಿ ಸೇರಿಸಿಕೊಂಡು ಬಿಡುತ್ತವೆ. ಈ ಪ್ರಕ್ರಿಯೆಯು ಮಹಿಳೆ, ಮಹಿಳಾ ಚಳುವಳಿ ಹಾಗೂ ಇತರ ಶೋಷಿತ ಗುಂಪುಗಳನ್ನು ವಿಭಜಿಸುತ್ತವೆ. ಕಾನೂನು, ಪ್ರಜಾತಂತ್ರ, ರಾಜಕೀಯಕ್ಕೆ ಪರ್ಯಾಯ ವ್ಯವಸ್ಥೆಯಲ್ಲ. ರಾಜಕೀಯ ಸಂಘರ್ಷಕ್ಕೆ ಕಾನೂನಿನಲ್ಲಿ ಪರಿಹಾರ ಕಂಡುಕೊಳ್ಳುವುದರಿಂದ ಕಾನೂನನ್ನು ರಾಜ್ಯದ ಅನುಕೂಲಕ್ಕೆ ಬಳಸಿಕೊಳ್ಳಲು ಪೂರಕ ವಾಗುತ್ತದೆ. ಪ್ರಸಕ್ತ ಬೇಡಿಕೆಯ ಸಮಸ್ಯೆಯೆಂದರೆ ಪರಿಹಾರವನ್ನು ವಿವಿಧ ಆಯಾಮವುಳ್ಳ ಕಾನೂನಿನ ಚೌಕಟ್ಟಿನಲ್ಲಿ ಪಡೆಯುವುದು. ನ್ಯಾಯಾಂಗ ವ್ಯವಸ್ಥೆಯು ಹೆಚ್ಚು ಜಾತ್ಯಾತೀತ ಹಾಗೂ ಪ್ರಜಾತಾಂತ್ರಿಕವಾಗಿರಬೇಕೆಂಬ ಆಧುನಿಕ ಧೋರಣೆಯನ್ನು ತಳೆಯಲಾಗಿದೆ. ಸಮಾಜವಾದೀ ಸ್ತ್ರೀವಾದಿಗಳೂ ಸಹ ಕಾನೂನು ಪರಿಣಾಮಕಾರಿಯಾದ ಬದಲಾವಣೆಯನ್ನು ತರಬಹುದೆಂದು ನಂಬುತ್ತಾರೆ. ಕಾನೂನಿನ ಸಂಸ್ಕೃತಿಯು ಅದರ ಇತರ ಸಂಸ್ಥೆಗಳಿಗೆ ನಿರ್ಣಾಯಕ ಸೈದ್ಧಾಂತಿಕ ನೆಲೆಯನ್ನು ಒದಗಿಸುತ್ತದೆಯೆಂಬ ಅಂಶವನ್ನೂ ಅಲಕ್ಷಿಸಲಾಗಿದೆ. ಇಂದು ನಾವು ಎದುರಿಸುವ ಹಲವಾರು ಗೊಂದಲಗಳು ರಾಜಕೀಯ ಒತ್ತಡ ಹಾಗೂ ಸೈದ್ಧಾಂತಿಕ ನೆಲೆಯಿಂದ ಮೂಡಿಬಂದವು.

ಐತಿಹಾಸಿಕವಾಗಿ ಪೌರತ್ವದ ಕಲ್ಪನೆಯು ರೂಪಿತವಾದ, ಸಾಂಸ್ಥಿಕಗೊಂಡ ಮಾದರಿಯಲ್ಲಿ ಕಾನೂನು ಸಂಸ್ಕೃತಿಯು ವಿಭಿನ್ನ ರೀತಿಯ ಪ್ರಕ್ರಿಯೆಯಲ್ಲಿ ತನ್ನ ಸ್ವರೂಪವನ್ನು ರೂಪಿಸಿಕೊಂಡಿದೆ. ಯಾರು ಹಕ್ಕನ್ನು ಪಡೆಯುತ್ತಾರೆಂಬ ಅಂಶವನ್ನು ಈ ಮೇಲಿನ ಎಲ್ಲಾ ಅಂಶಗಳು ನಿರ್ಧರಿಸುತ್ತವೆ. ಈ ಪೌರತ್ವದ ಪಿತೃ ಪ್ರಧಾನತೆಯ ಸ್ವರೂಪವನ್ನು ಬಹಿರಂಗಗೊಳಿಸಿರುವುದು ಮಹಿಳಾ ಚಳುವಳಿಯ ಮಹತ್ತರ ಸಾಧನೆಯಾಗಿದೆ. ಆದರೂ ಸ್ತ್ರೀಯರು ಜಾತಿ, ವರ್ಗ, ಪಂಗಡದ ಹಿನ್ನಲೆಗಳನ್ನು ಬದಿಗೊತ್ತಿ ಸ್ತ್ರೀಯರೆಂಬ ಕಾರಣಕ್ಕೆ ತಮ್ಮ ಹಕ್ಕನ್ನು ಸಮರ್ಥಿಸಿಕೊಳ್ಳಲು ಸಾಧ್ಯವಾಗುವುದಿಲ್ಲ. ಶಾಬಾನು ಮಹಿಳೆಯಾಗಿ ಜೀವನಾಂಶದ ಹಕ್ಕನ್ನು ಕೇಳಬಹುದಾಗಿದ್ದರೂ ಅವಳ ಮನವಿ ಸ್ವೀಕೃತವಾಗುವ ಪ್ರಕ್ರಿಯೆಯಲ್ಲಿ ಅವಳು ಮುಸ್ಲಿಂ ಎಂಬ ಅಂಶವನ್ನು ಅನಿವಾರ್ಯವಾಗಿ ಹೇಳಲೇಬೇಕಾಗುತ್ತದೆ. ಕಾನೂನು ಪ್ರತಿಯೊಬ್ಬ ವ್ಯಕ್ತಿಯು ಮೂಲಭೂತವಾದ ಹಕ್ಕನ್ನು ಹೊಂದಿದ್ದಾರೆಂದು ಒಪ್ಪಿಕೊಳ್ಳುವುದಿಲ್ಲವೆನ್ನುವುದಕ್ಕೆ ಹಲವಾರು ಕೇಸುಗಳನ್ನು ನೋಡಬಹುದು. ಕಾನೂನು ಯಾವ ಮಾದರಿಯ ವಾದವನ್ನು ಕೇಳುತ್ತದೆ? ಯಾವ ತರದ ನಡತೆಯನ್ನು ಕಾನೂನು ನಿರೀಕ್ಷಿಸುತ್ತದೆ? ಯಾವ ರೀತಿಯ ಭಾಷೆಯನ್ನು ಕಾನೂನು ಸಮ್ಮತಿಸುತ್ತದೆ? ಈ ಮೇಲಿನ ಅಂಶಗಳನ್ನು ಕಾನೂನು ಹೇಗೆ ನಿಯಂತ್ರಿಸುತ್ತದೆ ಹಾಗೂ ನ್ಯಾಯವನ್ನು ಪಡೆಯುವುದರಲ್ಲಿ ಈ ಅಂಶಗಳು ಹೇಗೆ ಪ್ರಮುಖ ಪಾತ್ರವನ್ನು ವಹಿಸುತ್ತವೆ? ಇತ್ತೀಚೆಗೆ ನಡೆದ ಬನ್ವಾರಿ ದೇವಿಯ ನಿದರ್ಶನವನ್ನೇ ತೆಗೆದುಕೊಳ್ಳಬಹುದು. ಕೆಳ ಜಾತಿಗೆ ಸೇರಿದ ಬನ್ವಾರಿ ದೇವಿ WDP ಕಾರ್ಯಕ್ರಮದ ಮೂಲಕ ಬಾಲ್ಯ ವಿವಾಹವನ್ನು ವಿರೋಧಿಸಿದ್ದಳು. ಮೇಲು ಜಾತಿಯ ಗಂಡಸರು ಅವಳ ಮೇಲೆ ಅತ್ಯಾಚಾರವೆಸಗಿದ ಆರೋಪವನ್ನು ನ್ಯಾಯಾಲಯ ಭಾರತೀಯ ಸಂಸ್ಕೃತಿಗೆ ಸಂಪೂರ್ಣವಾಗಿ ವಿರೋಧವಾದುದೆಂದು ತಳ್ಳಿ ಹಾಕಿತು. ಆರೋಪಿಗಳಲ್ಲಿ ಒಬ್ಬ ಬ್ರಾಹ್ಮಣನಾದುದರಿಂದ ಅವನು ಕೆಳವರ್ಗದ ಹೆಂಗಸಿನ ಮೇಲೆ ಅತ್ಯಾಚಾರವೆಸಗಲು ಸಾಧ್ಯವಿಲ್ಲ ವೆಂಬುದು ಆರೋಪಿಯ ಪರ ವಕೀಲರ ವಾದವಾಗಿತ್ತು. ನ್ಯಾಯಾಧೀಶರು ಈ ವಾದವನ್ನು ಸಮ್ಮತಿಸಿ ಭಾರತೀಯ ಸಂಸ್ಕೃತಿಯಲ್ಲಿ ಬೆಳೆದ ಹಳ್ಳಿಯ ಮುಗ್ಧ ಮನುಷ್ಯ ಇಂತಹ ಹೀನ ಕೃತ್ಯವನ್ನು ಎಸಗಲಾರನೆಂದು ತೀರ್ಪಣ್ಣಿತ್ತರು. ಬನ್ವಾರಿ ದೇವಿ ಅನಿವಾರ್ಯವಾಗಿ ಅಸ್ಪೃಸ್ಯ ಮನಸ್ಸಿನ ಅಪರಾಧಿಯಾದಳು.

ಅಸ್ಪಷ್ಟ ಮನಸ್ಸನ್ನು ಸಾಬೀತು ಮಾಡಬೇಕಾಗಿದ್ದ ನ್ಯಾಯಾಂಗ ವ್ಯವಸ್ಥೆ ಅಪರಾಧಿಯನ್ನು 'ಅಪರಾಧ'ದಿಂದ ಬಿಡುಗಡೆ ಮಾಡಿತು.

70ರ ದಶಕಲ್ಲಿ ಮಥುರಾ ಅತ್ಯಾಚಾರದ ಘಟನೆಯಿಂದ ಸಂಘಟಿತವಾದ ಮಹಿಳಾ ಚಳುವಳಿಯ ಕಾಲದಿಂದಲೂ ನ್ಯಾಯಾಂಗ ವ್ಯವಸ್ಥೆಯು ಮೇಲು ವರ್ಗದ, ಮೇಲು ಜಾತಿಯ ಗೌರವಾನ್ವಿತ ಪತಿವ್ರತಾ ಹೆಂಗಸರ ಹಕ್ಕುಗಳನ್ನು ಮಾತ್ರ ಗುರುತಿಸುತ್ತಾ ಬಂದಿದೆ. ಇನ್ನಿತರ ಹೆಂಗಸರು ಈ ವ್ಯವಸ್ಥೆಯಲ್ಲಿ ವೇಶ್ಯೆಯರಾಗುತ್ತಾರೆ. ಅತ್ಯಾಚಾರ ಕಾನೂನು ವೈಯಕ್ತಿಕ ಕಾನೂನಿನಡಿಯಲ್ಲಿ ಬರದಿದ್ದರೂ, ಅತ್ಯಾಚಾರಕ್ಕೆ ಸಂಬಂಧಪಟ್ಟ ತೀರ್ಪುಗಳಲ್ಲಿ ಸಂಸ್ಕೃತಿ ಹಾಗೂ ಸಿದ್ಧಾಂತ ಹೇಗೆ ನ್ಯಾಯದ ಸ್ವರೂಪವನ್ನ ನಿರ್ಧರಿಸುತ್ತದೆಯೆಂಬುದರ ಬಗ್ಗೆ ಮಹಿಳಾ ಚಳುವಳಿ ಎಚ್ಚರಿಕೆಯಿಂದರಬೇಕಾಗುತ್ತದೆ.

ಮೇಲಿನ ನಿದರ್ಶನಗಳು, ಲಿಂಗ, ಜಾತಿ, ವರ್ಗ ಪಂಗಡಗಳ ನಡುವಿರುವ ಘರ್ಷಣೆಗಳನ್ನು ತೋರಿಸುತ್ತದೆ. 'ತೀರ್ಮಾನ'ಗಳು ಹೇಗೆ ಸಂಸ್ಕೃತಿಯ ಪ್ರಭಾವ ಹಾಗೂ ನಿಯಂತ್ರಣಕ್ಕೊಳಗಾಗುತ್ತಿವೆಯೆಂಬ ಅಂಶವನ್ನು ಬೆಳಕಿಗೆ ತರುತ್ತದೆ. ಕಾನೂನುಗಳ ರಚನೆ, ವ್ಯಾಖ್ಯಾನ, ಬಳಕೆ ಇವೆಲ್ಲವೂ ಸಿದ್ಧಾಂತಗಳನ್ನು ಆಧರಿಸಿರುತ್ತವೆ. ನಾಗರೀಕ ಸಂಹಿತೆಯು ಹುಡುಕುವ 'ಪೌರತ್ವ' ಒಂದು ಅಮೂರ್ತ ಕಲ್ಪನೆ. ಪೌರತ್ವಕ್ಕೆ ಒತ್ತು ನೀಡುವುದರ ಮೂಲಕ ಇನ್ನಿತರ ಸಾಂಸ್ಕೃತಿಕ ಅಂಶಗಳನ್ನು ಮೂಲೆಗೆ ತಳ್ಳಲಾಗುತ್ತಿದೆ.

ಕಾನೂನಿನ ಸ್ವರೂಪ, ಪ್ರಕ್ರಿಯೆ, ತೀರ್ಮಾನಗಳ ಸ್ವರೂಪ, ಬದಲಾವಣೆಯ ಅಗತ್ಯ ಮುಂತಾದ ಕ್ಷೇತ್ರದಲ್ಲಿ ಮಹಿಳಾ ಚಳುವಳಿ ಬಲವಾದ ಪ್ರಭಾವವನ್ನು ಬೀರಿದೆ. ಕಾನೂನಿನ ಸಂಸ್ಕೃತಿಯ ಬಗ್ಗೆ ಯೋಚಿಸದೆ, ಕೇವಲ ಹೊಸ ಕಾನೂನುಗಳನ್ನು ಸೇರಿಸುವ ಪ್ರಯತ್ನ ಹೊಸ ಪ್ರಶ್ನೆಗಳನ್ನು ಹೊಸಕಿ ಹಾಕುತ್ತದೆ. ಕಾನೂನುಗಳು ಮಹಿಳೆಯರಿಗೆ ಪಕ್ಷಪಾತ ಮಾಡುವುದಲ್ಲದೆ, ವಿವಿಧ ರೀತಿಯ ಕಾನೂನುಗಳು ಬಳಕೆಯಲ್ಲಿರುವುದರಿಂದ, ಸ್ತ್ರೀಯರು ನ್ಯಾಯ ಪಡೆಯುವಲ್ಲಿ ಅಡ್ಡಿಯುಂಟು ಮಾಡುತ್ತವೆ. ಬಹಳಷ್ಟು ಮಹಿಳಾ ಗುಂಪುಗಳು ಭಾರತದ ಮಹಿಳೆಯರಿಗೆಲ್ಲಾ ಅನ್ವಯವಾಗುವ ಏಕರೂಪದ ಕಾನೂನನ್ನು ಅಪೇಕ್ಷಿಸುತ್ತಾರೆ. ವೈಯಕ್ತಿಕ ಕಾನೂನು ಜಾತ್ಯಾತೀತವಾಗಿರಬೇಕೆಂದು ಸಹ ನಿರೀಕ್ಷಿಸಲಾಗುತ್ತದೆ. ಈ ಅಪೇಕ್ಷೆಯು ಬಹುರೂಪಿ ಕಾನೂನನ್ನು ತಳ್ಳಿ ಹಾಕುತ್ತದೆ.

ರಾಜ್ಯ ತನ್ನ ಪರಿಧಿಯಲ್ಲಿ ಅಧಿಕಾರ ಸಂಬಂಧವನ್ನು ಪುನರ್ ಸಂಘಟಿಸಲು ಆಧುನಿಕ ಕಾನೂನನ್ನು ಒಂದು ತಂತ್ರವನ್ನಾಗಿ ಉಪಯೋಗಿಸುತ್ತಿರುವುದು ಹಿಂದಿನಿಂದಲೂ ಕಂಡು ಬರುತ್ತದೆ. 'ನ್ಯಾಯ'ದ ಅಮೂರ್ತ ಕಲ್ಪನೆ ರಾಜ್ಯದ ಉದಾರೀಕರಣದ ಪರಿಕಲ್ಪನೆಗೆ ಸಂಬಂಧಪಟ್ಟರೆ ಕಾನೂನಿನ ಅಭಿವೃದ್ಧಿಯು ಸದಾ ವ್ಯಕ್ತಿಗಳನ್ನು ರೂಪಿಸುವ ಆಧುನೀಕರಣಕ್ಕೆ ತಳುಕು ಹಾಕಿಕೊಂಡಿದೆ. ಒಂದು ಮಾದರಿಯ ಅಭಿವೃದ್ಧಿ, ಆಧುನಿಕತೆ, ಏಕರೂಪದ ಕಾನೂನುಗಳು ಇತರ ಪಂಗಡಗಳ ಹಿತಾಸಕ್ತಿಯನ್ನು ಮೂಲೆಗುಂಪಾಗಿಸುತ್ತದೆ. ರಾಜ್ಯದ ಒಂದು ಅಸ್ತ್ರವಾದ ಕಾನೂನು ನಾಗರೀಕ ಸಮಾಜದಲ್ಲಿ ಪ್ರಭಾವ ಬೀರುತ್ತಾ ಬಂದ ಹಾಗೆ ಸಂಪ್ರದಾಯಿಕ ಕಾನೂನುಗಳು ಮರೆಯಾಗುತ್ತವೆ.

ವೈಯಕ್ತಿಕ ಕಾನೂನುಗಳು ವಸಾಹತುಶಾಹಿಯ ಪಳಯುಳಿಕೆಯಾದ ಭಾರತ ಕಾನೂನು ವ್ಯವಸ್ಥೆಯ ವೈರುಧ್ಯಗಳು. ವೈಯಕ್ತಿಕ ಕಾನೂನುಗಳು ಕಾಲಾನುಕ್ರಮದಲ್ಲಿ ಮರೆಯಾಗುತ್ತವೆ ಎನ್ನುವುದು ಎಲ್ಲರ ನಂಬಿಕೆ. ಒಂದು ಜನಾಂಗ, ಪಂಗಡದೊಳಗಡೆಯೇ ಬದಲಾವಣೆ ನಡೆಯಬೇಕೆನ್ನುವವರೂ ಸಹ ಈ ವಾದವನ್ನು ಒಪ್ಪಿಕೊಳ್ಳುತ್ತಾರೆ. ಕಾನೂನು ಕೆಲವೊಮ್ಮೆ ವೈಯಕ್ತಿಕ ಕಾನೂನುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ ಎಂಬುದಕ್ಕೆ ಸರಳಾ ಮುದಗೋಳ್ ಪ್ರಕರಣ ಒಂದು ನಿದರ್ಶನ. ಮಾಧ್ಯಮ ಹಾಗು ಹಿಂದೂ ಶಕ್ತಿಗಳು ಈ ತೀರ್ಪಿನ ಹಿಂದಿರುವ ಸತ್ಯತೆಯನ್ನು ಒತ್ತಿ ಹೇಳಿದವು. ಸರಳಾ ಮುದಗೋಳ ತೀರ್ಪು ಇಂದು ಜನಾಂಗ, ಬಳಕೆಯಿರುವ ವೈಯಕ್ತಿಕ ಕಾನೂನಿನ ಅಸ್ತಿತ್ವವನ್ನು ನಿರಾಕರಿಸುತ್ತದೆ. ಮೇ 1996ರಲ್ಲಿ ಬಾಂಬೆಯಲ್ಲಿ 'ಹೊಸ ಕಾನೂನಿನ ಕರಡು ಪ್ರತಿ ತಯಾರಿಸುವ ಉದ್ದೇಶದಿಂದ ಎಡಪಂಥೀಯ ಹಾಗೂ ಮಹಿಳಾ ಸಂಘಟನೆಗಳು ಶಿಬಿರ ಏರ್ಪಡಿಸುವುದರ ಮೂಲಕ ತೀರ್ಪಿನ ಹಿಂದಿರುವ ವಾದವನ್ನು ಒಪ್ಪಿಕೊಂಡಿದ್ದಾರೆ.

ವೈಯಕ್ತಿಕ ಕಾನೂನಿನ ಪರಿಕಲ್ಪನೆಯ ಬಗ್ಗೆ ಇರುವ ಭಿನ್ನ ಅರ್ಥಗಳಿಂದಾಗಿ ಇಂದು ಘರ್ಷಣೆ ಉಂಟಾಗುತ್ತದೆ. ಈ ಗೊಂದಲದಲ್ಲಿ ಒಂದು ಮುಖ್ಯ ಅಂಶ ಮರೆಯಾಗುತ್ತಿದೆ. ವಸಾಹತುಶಾಹಿ ರಾಜ್ಯದ ಧರ್ಮ ನಿರಪೇಕ್ಷತೆ, ಧರ್ಮ, ರಾಜಕಾರಣ, ಪ್ರತ್ಯೇಕತೆ ಮುಂತಾದ ನಿಲುವುಗಳು ಬದಲಾವಣೆಯಾಗುತ್ತಾ ಬಂದಿವೆ. ವಿವಿಧ ಕಾಲ ಘಟ್ಟದಲ್ಲಿ ನ್ಯಾಯಾಂಗ ವ್ಯವಸ್ಥೆಯನ್ನು ವಿವಿಧ ರೀತಿಯಲ್ಲಿ ಅರ್ಥೈಸುತ್ತಾ ಬಂದಿದೆ.

## ಬಲಪಂಥೀಯರು ಮಹಿಳಾ ಗುಂಪುಗಳು

ಈ ಎಲ್ಲಾ ಸಂಕೀರ್ಣತೆಗಳ ನಡುವೆಯೇ ಮಹಿಳಾ ಗುಂಪುಗಳು ಏಕರೂಪ ಕಾಯಿದೆಗಾಗಿ ಕೆಲಸ ಮಾಡಬೇಕಾಗುತ್ತದೆ. ಲಿಂಗ ಸಮಾನತೆಯ ನ್ಯಾಯದ ಪರಿಕಲ್ಪನೆ, ಪ್ರಧಾನವಾಗಿ ಹಿಂದುತ್ವದ ಪರಿಕಲ್ಪನೆಯಿಂದ ಮೂಡಿ ಬಂದಿದೆ. ಇವರು ಮುಸ್ಲಿಂ ಜನಾಂಗವನ್ನು ಬದಲಾವಣೆಯಾಗದ, ಆಧುನಿಕತೆಗೆ ತೆರೆದುಕೊಳ್ಳದ ಜನಾಂಗವೆಂದೇ ಗುರುತಿಸುತ್ತಾರೆ.

ಮೇಲ್ಜಾತಿಯ, ಮೇಲು ವರ್ಗದ, ಹಿಂದೂ ಮಹಿಳೆಯರಿಂದ ಕೂಡಿದ ಮಹಿಳಾ ಸಂಘಟನೆಗಳು ಹಿಂದುತ್ವದ ವಾದವನ್ನು ಸಮರ್ಥಿಸುತ್ತಾ ಬಂದಿವೆ. ಫ್ಲೇವಿಯಾರವರು ಗುರುತಿಸಿದಂತೆ ಮಹಿಳಾ ಚಳುವಳಿಯು ಬಹುಪತ್ನಿತ್ವ ಜೀವನಾಂಶಕ್ಕೆ ಸಂಬಂಧಪಟ್ಟ ಸಮಸ್ಯೆಗಳನ್ನು ಮುಸ್ಲಿಂ ಮಹಿಳೆಯರ ಸಮಸ್ಯೆಯೆಂದು ಪರಿಗಣಿಸಿ, ಮೇಲ್ಜಾತಿಯ ಹಿಂದೂ ಹೆಂಗಸರ ಸಮಸ್ಯೆಗಳಾದ ವರದಕ್ಷಿಣೆ, ಮದುವೆಯನ್ನು ಸಾಬೀತು ಗೊಳಿಸುವುದು ಮುಂತಾದ ಸಮಸ್ಯೆಗಳನ್ನು ಸಾರಾ ಸಗಟಾಗಿ ಮಹಿಳೆಯರ ಸಮಸ್ಯೆಯೆಂದು ಪರಿಗಣಿಸುತ್ತಾ ಬಂದಿದೆ. ಪರಿಣಾಮವಾಗಿ ಮುಸ್ಲಿಂ ಪುರುಷರು ಶೋಷಣೆಯ ಸಂಕೇತವಾಗಿ ಕಂಡು ಸ್ತ್ರೀವಾದಿಗಳ ಕೋಪಕ್ಕೆ ಗುರಿಯಾಗುತ್ತಾರೆ. ಈ ನಿಲುವು ಅಪಾಯಕಾರಿಯಾಗಿ ಬಿ.ಜೆ.ಪಿ. ನಿಲುವಿಗೆ ಹತ್ತಿರವಾಗುತ್ತದೆ.

ಮಹಿಳಾ ಚಳುವಳಿ ಕೇಂದ್ರೀಕರಿಸುತ್ತಿರುವ ಕಾನೂನಿನ ಸಮಾನತೆ, ಅಶ್ಲೀಲತೆಯ ವಿರುದ್ಧ ಹೋರಾಟಗಳು ನಿಲುವಿಗೆ ಹತ್ತಿರವಾದವುಗಳು. ಈ ಎರಡು ಅಂಶಗಳು ಒಂದು ಕಡೆ ಸೇರುತ್ತಿರುವುದರ ಬಗ್ಗೆ ಸ್ತ್ರೀವಾದಿಗಳು ಗಂಭೀರವಾಗಿ ಯೋಚಿಸ ಬೇಕಾಗುತ್ತದೆ. ಮಹಿಳಾ ಚಳುವಳಿಯಿಂದ ಹಾಗೂ ಮೇಲು ವರ್ಗ, ಜಾತಿಯ ಮಧ್ಯಮ ವರ್ಗದ ನಗರ ಪ್ರದೇಶದ ಹಿಂದೂ ಮಹಿಳೆಯರಿಗೆ ಒಪ್ಪಿತವಾಗುವ ನೈತಿಕ ರಾಜಕೀಯ ಪರಿಕಲ್ಪನೆಯಿಂದ ಹೆಕ್ಕಿದ ಸ್ತ್ರೀ ಸ್ವಾತಂತ್ರ್ಯ ಹಾಗೂ ಸಮಾನತೆಯನ್ನು ಬಿ.ಜೆ.ಪಿಯ ಆಧುನಿಕತೆ ಜನಪ್ರಿಯಗೊಳಿಸುತ್ತಿದೆ. ಇತರ ನ್ಯಾಯದ ಪರಿಕಲ್ಪನೆಗಳನ್ನು 'ಅನಾಗರೀಕ, ಅನಾದಿ ಕಾಲದ'ವೆಂದು ತಳ್ಳಿ ಹಾಕುತ್ತಾರೆ. ವಿವಾಹ, ವಿಚ್ಛೇದನ, ಆಸ್ತಿ, ಹಕ್ಕು, ದತ್ತು, ವೈಯಕ್ತಿಕ ಕಾನೂನಿನ ಭಾಗಗಳಾದ ಇವುಗಳನ್ನು ಇಂದಿನ ಹಿಂದೂ ಕೋಮುವಾದಿ ವಾತಾವರಣದಿಂದ ಪ್ರತ್ಯೇಕಿಸಿ ಕೇವಲ 'ನ್ಯಾಯ'ದ ಅಳತೆಗೋಲಿನಿಂದ ಅಳೆಯಲು ಸಾಧ್ಯವಿಲ್ಲ.

ಮಹಿಳಾ ಚಳುವಳಿ 'ರಾಜ್ಯ'ವನ್ನು ಜಾತ್ಯಾತೀತವೆಂದು ಭಾವಿಸುತ್ತದೆ. ದೇಶ, ಜನಾಂಗ, ಲಿಂಗವನ್ನು ರೂಪಿಸುವ ಹಿಂದುತ್ವದಿಂದ ರಾಜ್ಯ ಹಾಗೂ ಇತರ ಸಂಸ್ಥೆಗಳು ಸ್ವತಂತ್ರವಾಗಿದೆಂದು ಹೇಳುತ್ತದೆ. 'ರಾಜ್ಯ ಹಾಗೂ ನ್ಯಾಯಾಂಗವನ್ನು' ತಟಸ್ಥ ಎಂದು ಪರಿಗಣಿಸಲಾಗುತ್ತದೆ. ಕೆಟ್ಟ ಹಾಗೂ ಹಿಂದುತ್ವವನ್ನು ಎತ್ತಿ ಹಿಡಿಯುವ ತೀರ್ಪುಗಳು ಐಕ್ಯತೆ ಹಾಗೂ ನಿಷ್ಪಕ್ಷಪಾತವನ್ನು ಪ್ರತಿನಿಧಿಸುವ ರಾಜ್ಯ ಹಾಗೂ ನ್ಯಾಯಾಂಗ ವ್ಯವಸ್ಥೆಯ ಅಪವಾದಗಳೆಂದು ಭಾವಿಸುತ್ತಾರೆ.

ಮಹಿಳಾ ಚಳುವಳಿ ಹೊಸ ಮಾದರಿಯ ದೃಷ್ಟಿಕೋನವನ್ನು ಹುಡುಕಬೇಕಾಗಿದೆ. ನ್ಯಾಯಂಗ ವ್ಯವಸ್ಥೆ, ಕಾನೂನು, ತೀರ್ಪುಗಳನ್ನು ವಿಶ್ಲೇಷಣಾತ್ಮಕವಾಗಿ ನೋಡುವುದರ ಮೂಲಕ ಲಿಂಗ ಸಮಾನತೆಯ ನ್ಯಾಯದ ಪರಿಕಲ್ಪನೆಯನ್ನು ವಿಸ್ತಾರಗೊಳಿಸಬೇಕಾಗಿದೆ. ಈ ಹಿಂದೆ ಮಹಿಳಾ ಚಳುವಳಿ ಇಂತಹ ಪ್ರಯತ್ನವನ್ನು ಮಾಡಿದೆ. ಮಥುರಾ ಹಾಗೂ ರಮೀಜಾಬಿ ಅತ್ಯಾಚಾರದ ಪ್ರಕರಣದಲ್ಲಿ ಅತ್ಯಾಚಾರ ಹಾಗೂ ಅದರ ಹಿಂದಿನ ಲೈಂಗಿಕ ಚಾರಿತ್ರ್ಯದ ಸಂಬಂಧಗಳನ್ನು ಬೇರ್ಪಡಿಸಿದೆ. ನೆಟ್-ಎನ್ ಕೇವಲ ಒಂದು ವೈಜ್ಞಾನಿಕವಾದ ಕುಟುಂಬ ಯೋಜನಾ ತಂತ್ರವಾಗಿರದೆ, ಅದು ಒಳಗೊಂಡಿರುವ ರಾಜಕೀಯ ಉದ್ದೇಶವನ್ನು ಬೆಳಕಿಗೆ ತಂದಿದೆ. ಉಸಿರು ಗಟ್ಟುವಂತಾದಾಗ ವಿವಾಹ ವ್ಯವಸ್ಥೆಯಿಂದ ಸ್ತ್ರೀಯರು ಹೊರ ಬರುವಂತಹ ಅವಕಾಶವನ್ನು ಸೃಷ್ಟಿಸಿದೆ. ಈ ಎಲ್ಲಾ ನಿದರ್ಶನಗಳಲ್ಲಿ ಹೊಸ ಕಾಯಿದೆಯನ್ನು ಪಡೆದೆವೊ ಅಥವಾ ಇಲ್ಲವೊ, ಸ್ತ್ರೀಯರಿಗೆ ಅಗತ್ಯವಾದ ನ್ಯಾಯದ ಪರಿಕಲ್ಪನೆಯ ಬಗ್ಗೆ ಪುನರ್ ಆಲೋಚಿಸುವಂತಾಯಿತು.

ಪ್ರಸಕ್ತ ಐತಿಹಾಸಿಕ ಸಂದರ್ಭದಲ್ಲಿ ನಾವು ಎಚ್ಚರಿಕೆಯಿಂದ ಈ ಎಲ್ಲ ಅನುಭವಗಳ ಹಿನ್ನೆಲೆಯಲ್ಲಿ ನಮ್ಮ ತಂತ್ರಗಳನ್ನು ರೂಪಿಸಿಕೊಳ್ಳಬೇಕಾಗಿದೆ. ಕಾನೂನಿನ ಮೂಲಕ ಬದಲಾವಣೆಯನ್ನು ನಿರೀಕ್ಷಿಸುವುದು, ರಾಜಕೀಯ ಸಮಸ್ಯೆಗೆ ಕಾನೂನಿನಲ್ಲಿ ಉತ್ತರ ಹುಡುಕಿದಂತೆ. ಮಹಿಳೆ ಮತ್ತು ಕಾನೂನಿಗೆ ಸಂಬಂಧಪಟ್ಟ ಕೆಲಸಗಳನ್ನು ಮಾಡುವುದರ ಜೊತೆ ಜೊತೆಯಲ್ಲಿ 'ಲಿಂಗ ಸಮಾನತೆಯ ನ್ಯಾಯ' ಪರಿಕಲ್ಪನೆಯ ಬಗ್ಗೆ ಪ್ರಶ್ನಿಸುವುದು ಅತ್ಯಗತ್ಯವಾಗಿದೆ.

ನ್ಯಾಯ ಹಾಗೂ ಹಕ್ಕುಗಳ ಪರಿಕಲ್ಪನೆಯು ಕೇವಲ ಕಾನೂನು ವ್ಯವಸ್ಥೆಯಿಂದ ಮೂಡಿಬಂದಿಲ್ಲ. ಕಾನೂನು ಸಂಸ್ಕೃತಿಯು ಕೇವಲ ನ್ಯಾಯಾಲಯದ ಕೊಠಡಿಗಳಿಗೆ ಸೀಮಿತವಾಗಿಲ್ಲ. ಸ್ತ್ರೀವಾದಿಗಳು ನ್ಯಾಯಾಲಯದಲ್ಲಿ ಮಾತ್ರವಲ್ಲದೆ, ಜಾತಿ ಪಂಚಾಯಿತಿಗಳಲ್ಲಿ, ಧಾರ್ಮಿಕ ಪಂಗಡಗಳಲ್ಲಿ, ಕುಟುಂಬಗಳಲ್ಲಿ, ಘರ್ಷಣೆಗಳಿಗೆ ಪರಿಹಾರ ಕಂಡುಕೊಳ್ಳುವ ಪ್ರಕ್ರಿಯೆಯಲ್ಲಿ ಭಾಗವಹಿಸ ಬೇಕಾಗುತ್ತದೆ. ಈ ಪ್ರಕ್ರಿಯೆಯ ಚರ್ಚೆ ನ್ಯಾಯಾಲಯದ ತೀರ್ಪುಗಳ ಮೇಲೂ ಪರಿಣಾಮ ಬೀರುತ್ತದೆ.

ಪ್ರಸಕ್ತ ರಾಜಕೀಯ ಸಂದರ್ಭದಲ್ಲಿ ಲಿಂಗ ಸಮಾನತೆಯ ನ್ಯಾಯದ ಪರಿಕಲ್ಪನೆಯನ್ನು ಸ್ತ್ರೀವಾದಿಗಳು ಪುನರ್ ಪರಿಶೀಲಿಸಬೇಕಾಗಿದೆ. ಸಮಾನ ನಾಗರೀಕ ಸಂಹಿತೆಯ ರಾಜಕೀಯ ಸ್ವರೂಪವನ್ನು ಒತ್ತಿ ಹೇಳುವುದರ ಜೊತೆಯಲ್ಲಿಯೇ ರಾಜಕೀಯ ಹಾಗೂ ನ್ಯಾಯಾಂಗದ ಸಂಸ್ಥೆಗಳನ್ನು ಪುನರ್ ಸೃಷ್ಟಿಸಿ 'ವಿಭಿನ್ನ ಸ್ವರೂಪ ನ್ಯಾಯಕ್ಕೆ' ಜವಾಬ್ದಾರಿಯಾಗಿರುವಂತೆ ಮಾಡಬೇಕಾಗಿದೆ.

*ಕೃಪೆ : ಇಪಿಡಬ್ಲ್ಯು (ಫೆಬ್ರವರಿ 1997)*
*'ಅನ್ವೇಷಿ' ಕಾನೂನು ಸಮಿತಿ ಲೇಖನದ ಅನುವಾದ*

# ಸಮಾನ ನಾಗರೀಕ ಸಂಹಿತೆ - ಪ್ರತಿಯೊಬ್ಬ ಮಹಿಳೆಯ ಪ್ರಾಥಮಿಕ ಹಕ್ಕು

ಸಮಾನ ಕಾನೂನುಗಳನ್ನು ಪಡೆಯಲು ಮಹಿಳಾ ಚಳುವಳಿಯು ನಡೆಸಿದ ಹೋರಾಟವು ಇಂದು ಎಷ್ಟರ ಮಟ್ಟಿಗೆ ದುರ್ಬಲಗೊಳಿಸಲ್ಪಟ್ಟಿದೆಯೆಂದರೆ ಸಮಾನ ನಾಗರೀಕ ಸಂಹಿತೆಯೇ ವಿವಾದಾಸ್ಪದ ವಿಶಯವಾಗಿ ಬಿಟ್ಟಿದೆ. ವಿಚ್ಛೇದ, ವಿವಾಹ, ಆಸ್ತಿ ಹಕ್ಕು, ಪಾಲಕತ್ವ ಇತ್ಯಾದಿ ಮಹಿಳಾ ಹಕ್ಕುಗಳನ್ನು ಮಾನ್ಯ ಮಾಡುವ ಮೂಲಕ ಸಮಾನತೆಯ ಮೂಲಭೂತ ಹಕ್ಕುಗಳನ್ನು ಜಾರಿಗೊಳಿಸಲು, ಪಿತೃಪ್ರಧಾನ ರಾಜ್ಯಾಂಗಕ್ಕೆ ಯಾವ ಆಸಕ್ತಿಯೂ ಇಲ್ಲ. ಮಹಿಳೆಯ ಹಕ್ಕಿಗೆ ಸಂಬಂಧಪಟ್ಟ ಯಾವ ಮಸೂದೆಯಾಗಲಿ ಜಾರಿಗೆ ಬರುವುದು, ತಿರಸ್ಕೃತಗೊಳ್ಳುವುದರ ಹಿಂದಿರುವುದು ಕೋಮಿನ ಹೆಸರಿನಲ್ಲಿ ವೋಟನ್ನು ಗಳಿಸುವ ಆಳುವ ಪಕ್ಷದ ಹುನ್ನಾರವಷ್ಟೆ. ಇದೇ ತರ್ಕವು, ಮಸೂದೆ ಕುರಿತು ವಿರೋಧ ಪಕ್ಷಗಳ ಪರ-ವಿರೋಧದ ನಿಲುವಿಗೂ ಅನ್ವಯಿಸುತ್ತದೆ. ಆಳುವ ಕಾಂಗ್ರೇಸ್ ಪಕ್ಷವು ಪಕ್ಷದ ಸಾಂಪ್ರದಾಯಿಕ ರಾಜಕಾರಣ ಅನುಸರಿಸಿ ಮುಸ್ಲಿಂ ಮೂಲಭೂತ ವಾದಿಗಳನ್ನು ಓಲೈಸಲು 1986ರಲ್ಲಿ ಮುಸ್ಲಿಂ ಮಹಿಳಾ ಕಾಯಿದೆಯನ್ನು ಜಾರಿಗೊಳಿಸಿತು. ಮಹಾರಾಷ್ಟ್ರದಲ್ಲಿ ಬಿಜೆಪಿ-ಶಿವಸೇನೆ ಸರ್ಕಾರವು ದ್ವಿಪತ್ನಿತ್ವ ವಿವಾಹವನ್ನು ತಡೆಯುವ ಮಸೂದೆಯನ್ನು ಜಾರಿಗೊಳಿಸಿ ಮುಸ್ಲಿಂ ಸಮುದಾಯದೊಳಗೆ ಮತ್ತಷ್ಟು ಅಭದ್ರತೆಯನ್ನುಂಟು ಮಾಡಿತು. ಆ ಮೂಲಕ ತನ್ನ ಹಿಂದೂ ಪ್ರಾಧಾನ್ಯತೆಯನ್ನು ಬಲಪಡಿಸಿಕೊಂಡಿತು. ಹಿಂದೆಂದಿಗಿಂತಲೂ ಕಳೆದೆರಡು ವರ್ಷಗಳಲ್ಲಿ ಮಹಿಳೆಯರಿಗಾಗಿ ಸಮಾನ ಕಾಯಿದೆಯನ್ನು ಜಾರಿಗೊಳಿಸುವ ವಿಷಯಕ್ಕೆ ಕೋಮುವಾದಿ ಬಣ್ಣ ನೀಡಲಾಗುತ್ತಿದೆ. ಅಧಿಕಾರದಲ್ಲಿರುವವರು ರಾಷ್ಟ್ರೀಯ ಜನಪ್ರಿಯ ಚರ್ಚೆಯ ಮೇರೆಗಳನ್ನು ಮತ್ತೊಮ್ಮೆ ರೂಪಿಸಿದರು. ಮಹಿಳೆಯರಿಗೆ ನಿಜವಾಗಿ ಸಮಾನತೆ ನೀಡಬೇಕೆಂಬ ಪ್ರಶ್ನೆ ಹಿಂದೂಡಲ್ಪಟ್ಟಿತ್ತು. ಎಲ್ಲ ಮಹಿಳೆಯರಿಗೂ ಸಮಾನ ನಾಗರೀಕ ಸಂಹಿತೆ ಬೇಕೆನ್ನುವುದಕ್ಕೆ ಬದ್ಧವಾದ ಸಂಘಟನೆಯಾಗಿ ನಮಗೆ, ಮಹಿಳಾ ಚಳುವಳಿಯಲ್ಲಿ ಸಂಹಿತೆ ಕುರಿತ ಚರ್ಚೆಯಲ್ಲಿ ಆದ ಬದಲಾವಣೆಗಳ ಬಗ್ಗೆ ಅರ್ಥ ಮಾಡಿಕೊಳ್ಳುವ ಹಾಗು ಪ್ರತಿಕ್ರಿಯಿಸುವ ಅಗತ್ಯವಿದೆ.

ಚರ್ಚೆಯಲ್ಲಿ ಆದ ಬದಲಾವಣೆಗೆ ಕಾರಣವಾದ ಒಂದು ಮುಖ್ಯ ಅಂಶವೆಂದರೆ - ಕೋಮುವಾದಿ, ಮೂಲಭೂತವಾದಿ ಶಕ್ತಿಗಳು ಹೆಚ್ಚಿ ಅಲ್ಪಸಂಖ್ಯಾತರೊಳಗಿನ ಅಭದ್ರತೆ ಹೆಚ್ಚಾಯಿತು, ಅದರಲ್ಲೂ ಮುಸ್ಲಿಂ ಸಮುದಾಯದಲ್ಲಿ. ಈಗ ವಯುಕ್ತಿಕ ಕಾನೂನುಗಳನ್ನು ತಮ್ಮ ಧಾರ್ಮಿಕ ಅಸ್ತಿತ್ವದ ಮುಖ್ಯ ಅಂಗವಾಗಿ ನೋಡುವ ಅವರು, ವಯುಕ್ತಿಕ ಕಾನೂನುಗಳಲ್ಲಿ ಸುಧಾರಣೆ ತರುವುದನ್ನು ವಿರೋಧಿಸುತ್ತಾರೆ. ಇದು, ಧಾರ್ಮಿಕ ಮುಖಂಡರುಗಳು ತಮ್ಮ ಸಮುದಾಯದ ಮಹಿಳೆಯರ ಮೇಲೆ ತಮ್ಮ ಹಿಡಿತವನ್ನು ಹೆಚ್ಚಿಸಲು ಕಾರಣವಾಗಿದೆ. ಹಾಗೆಯೇ ಅಭದ್ರತೆಯ ಮತ್ತು ಕೋಮು ಗಲಭೆಯ ವಾತಾವರಣದಲ್ಲಿ ಮಹಿಳೆಯರಿಗೆ ಸಮುದಾಯದ ಬೆಂಬಲವನ್ನು ಅವಲಂಬಿಸದೆ ಬೇರೆ ದಾರಿಯೂ ಇಲ್ಲ. ವಸ್ತುಸ್ಥಿತಿ ಹೀಗಿರುವಾಗ ಮಹಿಳೆಯರು ತಮ್ಮ ಸಮುದಾಯದ ಹಿಂಸಾತ್ಮಕ ವಾತಾವರಣದಿಂದ ಹೊರಬಂದು ದೊಡ್ಡಮಟ್ಟದ ಹೋರಾಟದಲ್ಲಿ ಪಾಲ್ಗೊಳ್ಳಲು ಹಿಂಜರಿಯುತ್ತಾರೆ. ಯಾವುದೇ ಗಂಡಾಂತರ ಪರಿಸ್ಥಿತಿಯಲ್ಲಿ ಮಹಿಳೆಯರಾಗಲಿ, ಪುರುಷರಾಗಲಿ ತಮ್ಮ ತಮ್ಮ ಸಮುದಾಯಗಳನ್ನು ಅವಲಂಬಿಸುವುದು ನಿಜವೆ. ಆದರೆ ಮಹಿಳೆಯರು ಮನೆಯಿಂದ ಹೊರ ಬರುವ ಅಥವಾ ಸಮುದಾಯವು ಸ್ಥಾಪಿಸಿರುವ ರೀತಿ ರಿವಾಜುಗಳನ್ನು ಆಯ್ಕೆಯಿಂದಲೋ ಬಲವಂತವಾಗಿಯೋ ವಿರೋಧಿಸಿದರೆ (ಉದಾ : ವಿವಾಹ ಮುರಿಯುವಿಕೆ) ಅಂತಹ ಸಂದರ್ಭದಲ್ಲಿ ಸಮಾನ ಕಾನೂನುಗಳ ಪ್ರಶ್ನೆ ಮುಖ್ಯವಾಗುತ್ತದೆ. ಆ ರೀತಿಯ ಸಂದರ್ಭಗಳಲ್ಲಿ ಕಾನೂನು ಸಹ ಅನ್ಯಾಯ, ಪಕ್ಷಪಾತದಿಂದ ಕೂಡಿದ್ದರೆ ಮಹಿಳೆಯರ ಸ್ಥಿತಿ ಶೋಚನೀಯವಾಗುತ್ತದೆ.

ಕಾನೂನು ಸುಧಾರಣೆಯ ಹಾದಿಯಲ್ಲಿ ಮಹಿಳಾ ಚಳುವಳಿಯ ಅನುಭವವು ಸಮಾಧಾನಕರವಾಗೇನೂ ಇರಲಿಲ್ಲ. ಚಳುವಳಿಯು ಸರ್ಕಾರದ ಮೇಲೆ ಒತ್ತಡ ತಂದು ಮಹಿಳಾ ಪರವಾದ ಕಾನೂನುಗಳನ್ನು ಜಾರಿಗೊಳಿಸುವಲ್ಲಿ ಯಶಸ್ವಿಯಾದರೂ, ಆ ಕಾನೂನುಗಳು ಮಹಿಳೆಯರ ಸ್ಥಿತಿಗತಿಗಳಲ್ಲಿ ಸುಧಾರಣೆ ತರಲು ಅಥವಾ ಮಹಿಳೆಯರ ಮೇಲಿನ ಹಿಂಸೆ, ಅಪರಾಧಗಳನ್ನು ತಡೆಯುವಲ್ಲಿ ನಿರರ್ಥಕವಾಯಿತು. ಈ ನಿರರ್ಥಕತೆಯೇ ಇಡೀ ಕಾನೂನಿನ ಸುಧಾರಣೆಯ ಬಗ್ಗೆ ಮರು ಆಲೋಚಿಸುವಂತೆ ಮಾಡಿದೆ. ಈ ಕಾನೂನುಗಳು ದಂಡನೆಗೆ ಅವಕಾಶ ನೀಡುವ ಮಾದರಿಯಲ್ಲಿದ್ದು, ಯಾವ ವಿಧದಲ್ಲೂ ಮಹಿಳೆ ಮತ್ತು ಪುರುಷರ ನಡುವೆ ಅಂತರ್ಗತವಾಗಿರುವ ಅಸಮಾನತೆಯ ಮೂಲಭೂತ ಪ್ರಶ್ನೆಯನ್ನು ಉದ್ದೇಶಿಸಲಿಲ್ಲ, ಆ ಕಾನೂನುಗಳಲ್ಲಿ ಲೋಪಗಳಿದ್ದು, ಅದು ರಾಜ್ಯಾಂಗದ ಅಧಿಕಾರವನ್ನು ಹೆಚ್ಚಿಸಿತೆ ಹೊರತು ಮಹಿಳೆಯರ ಜೀವನದಲ್ಲಿ ಬದಲಾವಣೆಯನ್ನೇನೂ ತರಲಿಲ್ಲ. ಅವು ಮಹಿಳೆಯರ ಪಾತ್ರ ಹಾಗು ವ್ಯಕ್ತಿತ್ವವನ್ನು ಕುರಿತು ಸ್ಥಾಪಿತವಾಗಿರುವ ಸಮಾಜದ

ಭಾವನೆಯನ್ನು ಸವಾಲು ಮಾಡುವ ಪ್ರಯತ್ನವನ್ನು ಮಾಡಲಿಲ್ಲ. ಕೆಲವು ಮೊಕದ್ದಮೆಗಳಲ್ಲಿ ಮಹಿಳೆಯರನ್ನೆ ತಪ್ಪಿತಸ್ಥರನ್ನಾಗಿಸಿತು. (ಉದಾ : ಲಿಂಗ ನಿರ್ಣಯ ಕುರಿತ ಕಾನೂನು) ಈ ಕಾನೂನುಗಳ ಜಾರಿಗೊಳಿಸುವಿಕೆಯಲ್ಲಿನ ದುರ್ಬಲತೆಯೆ, ಮಹಿಳೆ ಚಳುವಳಿಯಲ್ಲಿ ಕಾನೂನು ಸುಧಾರಣೆ ಬಗ್ಗೆ ಭ್ರಮನಿರಸನವನ್ನುಂಟು ಮಾಡಿದೆ.

ಮೂರನೆಯದಾಗಿ ರಾಜ್ಯಾಂಗದೊಂದಿಗೆ ಮಹಿಳಾ ಚಳುವಳಿಯ ಒಡನಾಟವು ಸಮಸ್ಯಾತ್ಮಕವಾದುದು. ರಾಜ್ಯಾಂಗವು ತನ್ನ ಹಿತಾಸಕ್ತಿಗಳ ಮತ್ತು ಮಹಿಳೆಯರ ಹಿತಾಸಕ್ತಿಗಳ ನಡುವಿರುವ ವ್ಯತ್ಯಾಸವನ್ನು ಮುಚ್ಚಿ ಹಾಕಲು ಮಹಿಳಾ ಚಳುವಳಿಯ ಕಾರ್ಯಸೂಚಿಯನ್ನು (agenda) ಹಾಗು ಅದರ ಪ್ರಗತಿಪರ ಭಾಷೆಯನ್ನು ಸಹಕರಣ(Co-Opt)ಗೊಳಿಸಿಕೊಂಡು ಬಿಟ್ಟಿದೆ. ಬಾಬರಿ ಮಸೀದಿಯನ್ನು ಉರುಳಿಸಲು ಹಾಗು ಆನಂತರದ ಅತ್ಯಾಚಾರ, ಗಲಭೆಗಳಿಗೆ ನೀಡಿದ ಪರೋಕ್ಷ ಬೆಂಬಲದಿಂದ ರಾಜ್ಯಾಂಗದ ಕೋಮುವಾದಿ ಬಣ್ಣವು ಬಯಲಾಯಿತು. ಅಂತಹ ಜನ ವಿರೋಧಿ ರಾಜ್ಯಾಂಗವು ಮಹಿಳಾ ಚಳುವಳಿಗೆ ಸ್ಪಂದಿಸುವೆನೆಂದು ಹೇಳಿಕೊಳ್ಳುತ್ತಲೆ, ಮಹಿಳೆಯರ ಹಿತಾಸಕ್ತಿಗೆ ಬದಲಾಗಿ, ಪ್ರಬಲ ಕೋಮಿನ ಹಿತಾಸಕ್ತಿಯನ್ನು ಕಾಯುವ ಬಹುಸಂಖ್ಯಾತರ ಮಸೂದೆಯನ್ನು ಹೇರಿಬಿಡುವ ಸಾಧ್ಯತೆಗಳಿವೆ.

### ಮಹಿಳೆಯರಾಗಿ ಒಂದಾಗುವುದೆ? ಅಥವಾ ಕೋಮಿನ ಹೆಸರಲ್ಲಿ ಬೇರಾಗುವುದೆ?

ಭಯ ಹಾಗು ಗುಮಾನಿಯ ಸಂದರ್ಭದಲ್ಲಿ ರಾಜ್ಯಾಂಗದಿಂದ ಕಾನೂನಿನ ಸುಧಾರಣೆ ಬಯಸುವ ಬಗ್ಗೆ ಮಹಿಳಾ ಚಳುವಳಿಯೊಳಗೆ ಮರುಚಿಂತನೆ ನಡೆದಿದೆ. ಚಳುವಳಿಯೊಳಗೆ ಕೆಲವರು, ಒಂದು ತಂತ್ರವಾಗಿ ಸಮಾನ ನಾಗರೀಕ ಸಂಹಿತೆಯನ್ನು ಸಧ್ಯಕ್ಕೆ ಕೈಬಿಡಬೇಕು ಬದಲಿಗೆ ಲಿಂಗ ಸಮಾನತೆಯತ್ತ ಒಯ್ಯುವ ಇತರೆ ಪರ್ಯಾಯಗಳನ್ನು ಹುಡುಕಬೇಕೆನ್ನುತ್ತಾರೆ. ಇನ್ನೂ ಕೆಲವರು ವಯಕ್ತಿಕ ಕಾನೂನಿನಡಿ ಬರದ ಕ್ಷೇತ್ರಗಳನ್ನು ಕಾನೂನಿನಡಿ ತರುವ ಅಗತ್ಯವಿದೆ ಯೆನ್ನುತ್ತಾರೆ. ಅವೆಂದರೆ ಹುಟ್ಟಿದ ಮನೆಯಲ್ಲಿ ಆಸ್ತಿ ಹಕ್ಕು ಅಥಾವಾ ಕೌಟುಂಬಿಕ ಹಿಂಸೆಯ ಕುರಿತ ಕಾನೂನು, 'ಏಕರೂಪ' (Uniform) ಎಂಬ ಪದದ ಬಗ್ಗೆಯೆ ಸಾಕಷ್ಟು ವಿರೋಧವಿದೆ. ಕಾರಣ ಏಕರೂಪತೆಯು ಅನೇಕತೆ ಮತ್ತು ವೈವಿಧ್ಯತೆಯನ್ನು ನಾಶಪಡಿಸುವುದಲ್ಲದೆ ಬಹುಸಂಖ್ಯಾತರ ಕಾನೂನನ್ನು ಹೇರುತ್ತದೆ ಎಂಬ ವಾದವಿದೆ. ಎಷ್ಟರಮಟ್ಟಿಗೆ ಈ ಅನೇಕತೆ ಹಾಗು ವೈವಿಧ್ಯತೆಯನ್ನು ಸಮರ್ಥಿಸಿಕೊಳ್ಳಲಾಗುತ್ತಿದೆ ಎಂಬುದು ಕಳವಳಕಾರಿ. ಅನೇಕತೆಯ ಕೊನೆಯೆ? ಅಥವಾ ಮಹಿಳೆಯರ ಮೂಲಭೂತ ಹಕ್ಕುಗಳನ್ನು ಹತ್ತಿಕ್ಕುವ ಮೂಲಕವೇ ವೈವಿಧ್ಯತೆಯನ್ನು ಉಳಿಸಿಕೊಳ್ಳಬೇಕೆ?

ಮಹಿಳೆಯರ ಸಮಾನ ಹಕ್ಕುಗಳ ಬೇಡಿಕೆಯನ್ನು ಸಹಕರಣ (Co-opt)ಗೊಳಿಸಿಕೊಂಡ ಹಿಂದುತ್ವ ಶಕ್ತಿಗಳು ಮಹಿಳಾ ಚಳುವಳಿಯ ಮೇಲೆ ಒತ್ತಡ ಹೇರಿವೆ. ಆ ಒತ್ತಡದಿಂದಾಗಿ ಮಹಿಳಾ ಚಳುವಳಿಯಲ್ಲಿರುವವರು ಎಲ್ಲಾ ಸಮುದಾಯದ ಮಹಿಳೆಯರಿಗೂ ಅನ್ವಯವಾಗುವ ಕಡ್ಡಾಯ ಕಾನೂನು ಬೇಕೆಂಬ ಬೇಡಿಕೆಯಿಂದಲೇ ಭಿನ್ನವಾಗುವಂತೆ, ಆ ಬೇಡಿಕೆಯಿಂದಲೆ ಕಡಿದುಕೊಳ್ಳುವಂತೆ ಮಾಡಿದೆ. ಇಂದು ಮಹಿಳಾ ಹಕ್ಕುಗಳ ಬೇಡಿಕೆಯನ್ನು ಜಾತಿ, ಕೋಮು, ಧರ್ಮ ಆಧಾರಿತ ವ್ಯಕ್ತಿತ್ವಕ್ಕೆ ಧಕ್ಕೆ ಎಂಬಂತೆ ನೋಡಿ ಹತ್ತಿಕ್ಕಲಾಗುತ್ತಿದೆ. ಮಹಿಳಾ ಚಳುವಳಿಯಲ್ಲೆ ಹಲವು ಗುಂಪುಗಳು ಮಹಿಳೆಯರ ಹಕ್ಕುಗಳನ್ನು ಧಾರ್ಮಿಕ ಹಾಗು ಅಲ್ಪಸಂಖ್ಯಾತ ವ್ಯಕ್ತಿತ್ವದೊಡನೆ ಜೋಡಿಸಿ ನೋಡುವ ಪ್ರವೃತ್ತಿಗೆ ಕಾರಣವಾಗಿದೆ. ಪರಿಣಾಮವಾಗಿ ಎಲ್ಲ ಜಾತಿ, ವರ್ಗ, ಧರ್ಮದ ಮಹಿಳೆಯರಿಗೆ ಸಲ್ಲುವ ಸಮಾನ ಹಕ್ಕುಗಳು ಬೇಕೆಂಬ ನಿಸ್ಸಂಶಯವಾದ, ದೃಢವಾದ ಬೇಡಿಕೆಯಿಂದಲೇ ಹಿಂತೆಗೆದುಕೊಳ್ಳುವಂತಾಗಿದೆ. ಈ ಬದಲಾವಣೆಯ ಬೇಡಿಕೆಯ ಸ್ವರೂಪದಲ್ಲಿ ಮಾತ್ರವಲ್ಲ, ಅದರ ವಿಶ್ಲೇಷಣೆ ಹಾಗು ಚರ್ಚೆಯಲ್ಲೂ ಕಂಡು ಬಂದಿದೆ. ಇದು ಮಹಿಳಾ ಹಕ್ಕುಗಳ ಹೋರಾಟಕ್ಕೆ ದೊಡ್ಡ ಹೊಡೆತವೇ ಸರಿ.

ಮುಂಚಿನಿಂದಲೂ ಮಹಿಳಾ ಚಳುವಳಿಯು, ಮಹಿಳಾ ಹೋರಾಟವು ವಯಕ್ತಿಕತೆಗಷ್ಟೇ ಸೀಮಿತವಾಗಿರಬಾರದೆಂಬ ಅರ್ಥವಂತಿಕೆಯ ಆಧಾರದ ಮೇಲೆ ನಿಂತಿತ್ತು. 'ಮೌನ ಮುರಿಯಿರಿ' 'ಬಂಧನವನ್ನು ತೊಡೆದು ಹಾಕಿ' ಎಂಬ ಘೋಷಣೆಗಳು ಮಹಿಳೆಯರ ನಿತ್ಯ ಜೀವನದಿಂದ ಹುಟ್ಟಿಕೊಂಡದ್ದು, ಕುಟುಂಬ ಹಾಗು ಧರ್ಮವು ಮಹಿಳಾ ಶೋಷಣೆಯ ಪ್ರತಿಪಾದಕರೆಂದು ವಿರೋಧಿಸುವಾಗ ಹುಟ್ಟಿಕೊಂಡದ್ದು. ಆದರೆ ಈಗ ಕುಟುಂಬ ಹಾಗು ಧರ್ಮದ ಸಂಕೋಲೆಗಳನ್ನು ಬಲಗೊಳಿಸಲಾಗುತ್ತಿದೆ. ಇದು ಮಹಿಳಾ ಶೋಷಣೆಯ ಅರ್ಥೈಸುವಿಕೆಯಲ್ಲಿ ಆಗಿರುವ ಬದಲಾವಣೆಯೆ? ಅಥವಾ ಕುಟುಂಬ ಹಾಗು ಸಮುದಾಯದ ಗಡಿಯೊಳಗೆ ಮಹಿಳಾ ವಿಮೋಚನೆಗಾಗಿ ಹೋರಾಟ ನಡೆಸಬೇಕೆಂಬುದರ ಸಮರ್ಥನೆಯೆ?

ಸಮುದಾಯದ ಒಳಗಿರುವ ವಿಭಜನೆಗಳಿಗೆ ಒತ್ತು ನೀಡುವುದು ಬೇರೆ ಬೇರೆ ಸಮುದಾಯದ ಮಹಿಳೆಯರು ಬೇರೆ ಬೇರೆಯಾಗಿಯೆ ಹೋರಾಟವನ್ನು ನಡೆಸಬೇಕೆಂಬ ಸಂದೇಶವನ್ನು

ನೀಡುತ್ತದೆ. ಆ ಮೂಲಕ ಸಂಘಟಿತ ಹೋರಾಟವನ್ನು ಕ್ಷೀಣಗೊಳಿಸುತ್ತದೆ. ಮಹಿಳೆಯರನ್ನು ಸಮುದಾಯ ಹಾಗು ಧರ್ಮದ ಆಧಾರದ ಮೇಲೆ ವಿಭಾಗಿಸುವುದು ವರ್ಗಾಧಾರಿತ ಸಮಾಜದಂತಹ ಬೇರ ವ್ಯತ್ಯಾಸಗಳನ್ನು ಕಡೆಗಣಿಸುತ್ತದೆ. ಹೋರಾಟದಲ್ಲಿರುವ ಮಹಿಳೆಯರ ರಾಜಕೀಯ ಐಕ್ಯಮತ್ಯವು ನಿರ್ಣಾಯಕವಾದದು. ಹೋರಾಟಗಳ ನಡುವೆ ಇರುವ ಜಾತಿ, ಧರ್ಮವನ್ನಾಧರಿಸಿದ ವಿಭಜನೆಯನ್ನು ದಾಟಿದ ಸಮಾನ ಅಂಶವೇ ಈ ಐಕ್ಯಮತ್ಯಕ್ಕೆ ಕಾರಣವಾಗಿದೆ. ಸಮುದಾಯದಾಚೆಯೂ ಸಮಾನ ಆಸಕ್ತಿಗಳನ್ನು ಹಂಚಿಕೊಳ್ಳುವ ಮಹಿಳೆಯರ ಸಾಮರ್ಥ್ಯವನ್ನು ಸಂಘಟಿಸುವ ಪ್ರಯತ್ನವನ್ನು ಅಲ್ಲಗೆಳೆಯಲು ಸಾಧ್ಯವಿಲ್ಲ.

ಕೋಮು ಹಾಗು ಧರ್ಮದ ಆಧಾರದ ಮೇಲೆ ಮಹಿಳೆಯರನ್ನು ಸಂಘಟಿಸಲು ಪ್ರಯತ್ನಿಸುವ ಧಾರ್ಮಿಕ, ಪಿತೃಪ್ರಧಾನ ಶಕ್ತಿಗಳೇ ಮಹಿಳೆಯರ ಮೇಲೆ ಅಧಿಕಾರ ಚಲಾಯಿಸಲು, ಹಿಡಿತ ಸಾಧಿಸಲು ಕಾರಣವಾಗುತ್ತವೆ. ಅಲ್ಲದೆ ಮಹಿಳೆಯರ ವಿಮೋಚನೆಯಲ್ಲಿ ಧರ್ಮದ ಪಾತ್ರ ಪ್ರಶ್ನಾರ್ಹ. ನಿಜವೆಂದರೆ ಈಗ ಮಹಿಳೆಯರಿಗೆ ಲಭ್ಯವಿರುವ ಯಾವುದೇ ಹಕ್ಕುಗಳಾಗಲಿ ಸಾಧ್ಯವಾಗಿರುವುದು ಧಾರ್ಮಿಕ ಗ್ರಂಥಗಳ ಪ್ರಗತಿಪರ ವಿವರಣೆಗಿಂತಲೂ ಸಮಾನತೆ, ನ್ಯಾಯವನ್ನಾಧರಿಸಿದ ಪ್ರಗತಿಪರ ಸಿದ್ಧಾಂತಗಳ ಶಿಫಾರಸ್ಸಿನಿಂದ. ಧಾರ್ಮಿಕ ವ್ಯಕ್ತಿತ್ವ ಕುರಿತ ವಾದವು ಧರ್ಮದ ಮೂಲವೇ ಆಗಿರುವ ಪಿತೃ ಪ್ರಧಾನತೆಯ ವಿಶ್ಲೇಷಣೆಯನ್ನು ಸಂಪೂರ್ಣವಾಗಿ ಅಲ್ಲ ಗೆಳೆಯುತ್ತದೆ ಹಾಗು ಮಹಿಳೆಯರನ್ನು ಕುಟುಂಬದೊಳಗೇ ಬಂಧಿಸುವುದರ ಹಿಂದಿರುವ ಸೈದ್ಧಾಂತಿಕ ಮತ್ತು ಆದಾಯದ (material) ಸಾಮರ್ಥ್ಯವನ್ನು ನಿರಾಕರಿಸುತ್ತದೆ.

ಸಮಾನ ನಾಗರೀಕ ಸಂಹಿತೆಯು ಎಲ್ಲಾ ಸಮುದಾಯ ಗಳಿಗೂ ಏಕರೂಪತೆಯನ್ನು ತರುವ ಅಪಾಯದ ಬಗ್ಗೆ ಹೇಳಲಾಗುತ್ತಿದೆ. ಆದರೆ ಕೋಮಿನ ಆಧಾರದ ಮೇಲೆ ಅನೇಕತೆಯನ್ನು ಪ್ರೋತ್ಸಾಹಿಸುವುದೂ ಅಪಾಯಕಾರಿಯೆ. ವೈವಿಧ್ಯತೆಯನ್ನು ಗುರುತಿಸಲು ಸಾಂಪ್ರದಾಯಿಕ ಆಚರಣೆಗಳನ್ನು ರಕ್ಷಿಸಬೇಕೆಂದು ವಾದಿಸುವವರು ಎಲ್ಲಾ ಸಾಂಪ್ರದಾಯಿಕ ಆಚರಣೆಗಳು ಮಹಿಳಾ ಪರವಲ್ಲ ಎಂಬುದನ್ನು ಕಡೆಗಣಿಸುತ್ತಾರೆ. ಆದಿವಾಸಿ ಜನಾಂಗಗಳ ಅನೇಕ ಸಾಂಪ್ರದಾಯಿಕ ಆಚರಣೆಗಳು ಮಹಿಳೆಯರಿಗೆ ದುರ್ಭರವಾಗಿವೆ. ಮಾತೃಪ್ರಧಾನ ಸಮಾಜಗಳಾದ ಕೇರಳದ ನಾಯರ್, ಮೇಘಾಲಯದ ಖಾಸಿಸ್‌ಗಳೂ ಮಹಿಳೆಯರ ಹೋಲಿಕೆಯ ದೃಷ್ಟಿಯಿಂದ ಉತ್ತಮ ಸ್ಥಿತಿ ಯಲ್ಲಿದ್ದರೂ ಭೂ ಒಡೆತನ ಸಂಪೂರ್ಣ ಅವರ ಕೈಯಲ್ಲಿಲ್ಲ ಮತ್ತು ಆಸ್ತಿಯನ್ನು ಮಾರುವ ನಿರ್ಣಯವು ಅವರ ಹತೋಟಿಯಲ್ಲಿಲ್ಲ.

ಮಹಿಳೆಯರ ಮೇಲೆ ಹೆಚ್ಚುತ್ತಿರುವ ಸಮುದಾಯದ ಹಿಡಿತವು ಅನೇಕ ಸಮುದಾಯದ ಮೇಲೆ ಸಾಂಪ್ರದಾಯಿಕ ಆಚರಣೆಗಳನ್ನು ಪ್ರೋತ್ಸಾಹಿಸಲು, ಕ್ರೂಢಿಕರಿಸಲು ಒತ್ತಡ ಹೇರುತ್ತದೆ. ಸಿಖ್ ಜನಾಂಗದಲ್ಲಿ ಕರೇವಾ ಆಚರಣೆಯನ್ನು ಮಾನ್ಯ ಮಾಡಬೇಕೆಂದು ಕೇಳಲಾಗಿತ್ತು. ಆ ಆಚರಣೆಯ ಪ್ರಕಾರ ವಿಧವೆಯು ಮಡಿದ ಪತಿಯ ತಮ್ಮನನ್ನೆ ಮದುವೆಯಾಗಬೇಕು. ಆಸ್ತಿಯ ಮೇಲೆ ಕುಟುಂಬದ ಹಿಡಿತವನ್ನು ಉಳಿಸಿಕೊಳ್ಳುವುದು ಆಚರಣೆಯ ಹಿಂದಿನ ಉದ್ದೇಶವಾಗಿತ್ತು. ಸಮುದಾಯದ ಒತ್ತಡವು ಯಾವ ವಿವೇಚನೆ ಇಲ್ಲದೆ ಸಾಂಪ್ರದಾಯಿಕ ಆಚರಣೆಗಳನ್ನು ಕ್ರೋಢಿಕರಿಸುವುದಕ್ಕೆ ಕಾರಣವಾಗುತ್ತದೆ. ಮಹಿಳಾ ಸಂಘಟನೆಗಳು ಸಾಂಪ್ರದಾಯಿಕ ಕಾನೂನಿನಲ್ಲಿ ಬದಲಾವಣೆಗಾಗಿ ಒತ್ತಾಯಿಸುತ್ತಿದ್ದರೆ ಸರ್ಕಾರವು 1994ರಲ್ಲಿ ಸಾಂಪ್ರದಾಯಿಕ ಕಾನೂನುಗಳಿಗೆ ಹಾಗು ಸಾಮಾಜಿಕ ಆಚರಣೆಗಳಿಗೆ ರಕ್ಷಣೆ ನೀಡುವ ಮಸೂದೆಯನ್ನು ಜಾರಿಗೆ ತಂದಿತು. ಮಸೂದೆಯನ್ನು ರದ್ದುಪಡಿಸಲು ಮಹಿಳಾ ಸಂಘಟನೆಗಳು ಹೋರಾಡುತ್ತಿವೆ. ಸಮುದಾಯಗಳು ಮಹಿಳಾ ಪರವಲ್ಲದ ಆಚರಣೆಗಳನ್ನು ಸಾಂಪ್ರದಾಯಿಕ ಆಚರಣೆಗಳೆಂದು ಸಮರ್ಥಿಸಿಕೊಳ್ಳುವ ಮೂಲಕ ನ್ಯಾಯಾಲಯದ ಮೇಲೂ ಪ್ರಭಾವ ಬೀರಬಹುದು. ಕೋಮುವಾದಿ ವ್ಯಕ್ತಿತ್ವವನ್ನು ಎತ್ತಿ ಹಿಡಿಯುವ ವಾದದಲ್ಲಿ ಮಹಿಳೆಯರ ಜೀವನ, ಸ್ಥಾನಮಾನವನ್ನು ಉತ್ತಮಗೊಳಿಸುವ ಬಗ್ಗೆ ಪಿತೃಪ್ರಧಾನ ಸಮಾಜವನ್ನು ಇನ್ನೂ ಹೆಚ್ಚು ಸಂಕುಚಿತಗೊಳಿಸುವ ಅಪಾಯವಿದೆ.

ಅಲ್ಲದೆ ಮಹಿಳೆಯರು ಸಮುದಾಯದ ಆಧಾರದ ಮೇಲೆ ಸಂಘಟಿತರಾದರೆ ಸಮಾಜ ಹಾಗು ಸರ್ಕಾರ ಎರಡೂ ಕಿವುಡಾಗುವ ಸಾಧ್ಯತೆಯಿದೆ. ಕ್ರಿಶ್ಚಿಯನ್ ಮಹಿಳಾ ಸಂಘಟನೆಗಳು ತಯಾರಿಸಿದ ಮಸೂದೆಯನ್ನು ಪಾರ್ಲಿಮೆಂಟಿನಲ್ಲಿ ಮಂಡಿಸಿ ಹಲವಾರು ವರ್ಷಗಳೇ ಆದವು. ಮಸೂದೆ ಇನ್ನೂ ಧೂಳು ಕುಡಿಯುತ್ತ ಕೂತಿದೆ. 1995ರಲ್ಲಿ ಬಾಂಬೆಯಲ್ಲಿ ಮುಸ್ಲಿಂ ಮಹಿಳಾ ಸಂಘಟನೆಯೊಂದು ವಿವಾಹಕ್ಕೆ ಸಂಬಂಧಪಟ್ಟಂತೆ, ಮಹಿಳಾ ಪರವಾದ ಕೆಲವು ನಿರ್ದಿಷ್ಟ ಸವಲತ್ತುಗಳನ್ನೊಳಗೊಂಡ ಪರ್ಯಾಯ ನಿಖಾನಾಮದ ಕರಡನ್ನು ತಯಾರಿಸಿ ಮಂಡಿಸಿತು. ಮುಂದಿನ ಮಾತುಕತೆಗಾಗಿ ಅದನ್ನು ಮುಸ್ಲಿಂ ವಯಕ್ತಿಕ ಕಾನೂನು ಮಂಡಳಿಯ ಮುಂದಿಡಲಾಗಿದೆ. ಇಂತಹ ಪರಿಸ್ಥಿತಿಯಲ್ಲಿ ಬದಲಾವಣೆಯನ್ನು ಬಯಸುವ ದನಿಗಳು ಸಮುದಾಯದ ವಿರೋಧವನ್ನೆದುರಿಸಬೇಕಾಗುತ್ತದೆ.

### ಐಚ್ಛಿಕ ಸಮಾನತೆ?

ಸಮಾನ ನಾಗರೀಕ ಸಂಹಿತೆಯನ್ನು ಕುರಿತ ಅನೇಕ ನಿಲುವುಗಳು ಮೂಲಭೂತವಾಗಿ ಬಯಸುವುದು ಲಿಂಗ ಸಮಾನತೆಯನ್ನು. ಆದರೆ ಜಾರಿಗೊಳಿಸುವ ಪ್ರಕ್ರಿಯೆಯಲ್ಲಿ ಅಥವಾ ತಂತ್ರದ ಆಯ್ಕೆಯಲ್ಲಿ ದೊಡ್ಡ ವ್ಯತ್ಯಾಸವಿದೆ. ಲಿಂಗ ಸಮಾನ ಕಾನೂನನ್ನು ಜಾರಿಗೊಳಿಸಬೇಕು ಮತ್ತು ಅದು ವಿಶೇಷ ವಿವಾಹ ಕಾಯಿದೆ (Special Marriage Act) ರೀತಿಯಲ್ಲಿ ಬೇಕೆನ್ನುವವರಿಗೆ ಆಯ್ಕೆಯ ಸ್ವಾತಂತ್ರ್ಯವಿರಬೇಕೆಂಬ ಬೇಡಿಕೆ ಇದೆ. ಮತ್ತೊಂದು ವಾದದ ಪ್ರಕಾರ - ಹುಟ್ಟಿನಿಂದ ಎಲ್ಲರಿಗೂ ಲಿಂಗ ಸಮಾನ ಕಾಯಿದೆಯು ಅನ್ವಯಿಸಬೇಕು. ಮುಂದೆ ಬೇಕೆಂದರೆ ವಯಕ್ತಿಕ ಕಾನೂನಿನ ಮೊರೆಹೋಗುವ ಆಯ್ಕೆ ಇರಬೇಕು. ಎರಡೂ ನಿಲುವುಗಳು ಸಮಸ್ಯಾತ್ಮಕವಾಗಿದ್ದು ವಾಸ್ತವಿಕತೆಗೆ, ಮಹಿಳೆಯರ ಜೀವನ ಸಂದರ್ಭಕ್ಕೆ ದೂರವಾಗಿವೆ. ಆಯ್ಕೆ ಸ್ವಾತಂತ್ರ್ಯವು ಮಹಿಳೆಯರಿಗೆ ತಮ್ಮ ಹಕ್ಕನ್ನು ಚಲಾಯಿಸುವ ಸ್ವಾತಂತ್ರ್ಯವನ್ನು ನೀಡುವುದೇ? ಎಂಬುದು ಸಂಶಯಾಸ್ಪದ. ಸದ್ಯದ ಅಧಿಕಾರ ಮತ್ತು ಸಂಪನ್ಮೂಲಗಳ ಅಸಮತೋಲನ ಪರಿಸ್ಥಿತಿಯಲ್ಲಿ ಅಸಮತೋಲನವನ್ನು ಸರಿಪಡಿಸುವ ಯಾವುದೇ ಕಾನೂನ್ನನ್ನು ಸ್ವಯಂ ಪ್ರೇರಣೆಯಿಂದ ಜಾರಿಗೊಳ್ಳಲು ಬಿಟ್ಟರೆ ಅದು ಪರಿಣಾಮಕಾರಿಯಾಗುವುದಿಲ್ಲ. ಈಗಿರುವ ಕಾನೂನು ವ್ಯವಸ್ಥೆಯಲ್ಲಿ ವಿಶೇಷ ಸವಲತ್ತುಗಳನ್ನು ಹೊಂದಿರುವ ಪುರುಷರು ತಿಕ್ಕಾಟದ ಸಂದರ್ಭದಲ್ಲಿ ತಮಗೆ ಅನುಕೂಲಕರವಾದ ಕಾನೂನಿನತ್ತ ವಾಲುವ ಸಂಭವ ಹೆಚ್ಚು.

ನಮ್ಮ ಸಮಾಜದ ವಯಕ್ತಿಕ ಕಾನೂನಿನಲ್ಲಿರುವ ಮಹತ್ವದ ವಿಷಯಗಳಲ್ಲಿ ಪುರುಷರು ಹುಟ್ಟಿನಿಂದಲೂ ಅನುಕೂಲಕರವಾದ ಕಾನೂನುಗಳ ಪ್ರಯೋಜನವನ್ನು ಹೊಂದಿದ್ದಾರೆ. ಆದರೆ ಮಹಿಳೆಯರು ತಮ್ಮ ಪಾಲಿನ ಹಕ್ಕಿಗಾಗಿ ದೊಡ್ಡ ಹೋರಾಟವನ್ನೆ ಮಾಡಬೇಕಾಯಿತು. ಮೊಕದ್ದಮೆಯ ದೀರ್ಘ ಪ್ರಕ್ರಿಯೆಯಲ್ಲಿ ತೊಡಗಿಕೊಳ್ಳಬೇಕಾಯ್ತು. ಯಾವುದೇ ವಿಧದಲ್ಲಾಗಲಿ ಈ ಐಚ್ಛಿಕ ಮಸೂದೆ (Optical Code)ಯು ಹೆಚ್ಚು ಮಹಿಳೆಯರಿಗೆ ಉಪಯೋಗವಾಗಲಾರದು. ಹುಟ್ಟಿನಿಂದ ಲಿಂಗಸಮಾನ ಕಾಯಿದೆಗೆ ಒಳಪಟ್ಟು ಮುಂದೆ ಆಯ್ಕೆಯಾಗಿ ವಯಕ್ತಿಕ ಕಾನೂನಿಗೆ ಹಿಂತಿರುಗುವುದು ಸಮಾನತೆಯ ಹಿಂದಿನ ಉದ್ದೇಶವನ್ನು ಪೂರೈಸುವುದಿಲ್ಲ.

ಮಹಿಳೆಯರ ಹಕ್ಕುಗಳಿಗಾಗಿ ನಡೆಸುವ ಹೋರಾಟವು- ಮಹಿಳೆ ಸಮಾನ ಅವಕಾಶ, ಸಮಾನ ಕಾನೂನುಗಳ ಪ್ರಜಾಸತ್ತಾತ್ಮಕ ಸಮಾಜದ ನಾಗರೀಕಳೆಂದು ಗುರುತಿಸಿಕೊಳ್ಳಲು ನಡೆಸುವ ಹೋರಾಟ. ಪ್ರಜಾಸತ್ತಾತ್ಮಕತೆ ಹಾಗು ಸಮಾನತೆ ಎಂಬ ಮೂಲಭೂತ ಪ್ರಶ್ನೆಗಳು ಐಚ್ಛಿಕವಾಗಲು ಸಾಧ್ಯವೇ ಇಲ್ಲ. ಐಚ್ಛಿಕ ಮಸೂದೆ ಬೇಕೆನ್ನುವ ವಾದವು ಜಾತಿ, ವರ್ಗ ಅಥವಾ ಲಿಂಗ ಭೇದವಿಲ್ಲದೆ ಕೆಲವು ಮೂಲಭೂತ ಹಕ್ಕುಗಳ ಭರವಸೆಯನ್ನು ಎಲ್ಲರಿಗೂ ನೀಡುವ ಸಂವಿಧಾನದ ತಾತ್ವಿಕ ಅಡಿಪಾಯವನ್ನು ಉಲ್ಲಂಘಿಸುತ್ತದೆ. ಕಾನೂನಿನ ಮುಂದೆ ಎಲ್ಲರೂ ಒಂದೇ ಎಂಬುದು ಆ ಮೂಲಭೂತ ಹಕ್ಕುಗಳಲ್ಲೊಂದು. ಇದು ಪ್ರಪಂಚಾದ್ಯಂತ ಬಿಡುಗಡೆಗಾಗಿ ಹೋರಾಟ ನಡೆಸುತ್ತಿರುವ ಲಕ್ಷಾಂತರ ಜನರ ಮೂಲಭೂತ ತತ್ವವೂ ಹೌದು. ಐಚ್ಛಿಕ ಲಿಂಗಸಮಾನ ಮಸೂದೆಯು ಸಮಾನತೆಯನ್ನು ಬಯಸುವ ಶೋಷಿತರಿಗೆ ಆಯ್ಕೆ ಸ್ವಾತಂತ್ರ್ಯವನ್ನು ನೀಡುತ್ತದೆ ಎಂಬುದು ಸಂಶಯಾಸ್ಪದ. ●

## ಕಂತಿನಲ್ಲಿ ತಲುಪುತ್ತಿರುವ ದಾನ!

ಅಂತೂ ವಿಶ್ವಸುಂದರಿ ಸ್ಪರ್ಧೆ ಮುಗಿದು 5 ತಿಂಗಳ ನಂತರ ಕೃಪೆ ತೋರಿ ABCL ನವರು 20 ಲಕ್ಷ ರೂ.ಗಳ ಚೆಕ್ ಅನ್ನು ಸ್ಪಾಸ್ಟಿಕ್ ಸೊಸೈಟಿ ಆಫ್ ಇಂಡಿಯಾದವರಿಗೆ ನೀಡಿದ್ದಾರೆ. ಕೆನರಾ ಬ್ಯಾಂಕಿನ 2 ಚೆಕ್‌ಗಳು (ಪ್ರತಿ ಚೆಕ್ 10 ಲಕ್ಷ) ಹಣ ಕೈ ಸೇರುವವರೆಗೂ ಸ್ಪಾಸ್ಟಿಕ್ ಸೊಸೈಟಿಯವರು ಉಸಿರು ಹಿಡಿದು ಕೂತಿರಬೇಕು. ಏಕೆಂದರೆ ಚೆಕ್‌ಗಳು ಮುಂದಿನ ದಿನಾಂಕದವು! ಒಂದು ಚೆಕ್‌ನ ದಿನಾಂಕ 15.4.1997 ಮತ್ತೊಂದರದು 25.4.1997. ಪಟ್ಟು ಹಿಡಿದು ವಸೂಲಿ ಮಾಡಲು ಬರ್ಮನ್ ಸಾಹೇಬರ ಸಹಾಯ ಕೇಳಬಹುದು!

ತಡವಾದುದಕ್ಕೆ ಕ್ಷಮೆ ಕೇಳಿರುವ ABCL ನವರು ಉಳಿದ ಹಣವನ್ನು (ಕೊಡಲು ಒಪ್ಪಿಕೊಂಡದ್ದು 66 ಲಕ್ಷ) ಶೀಘ್ರವೇ ಕಳಿಸುವುದಾಗಿ ತಿಳಿಸಿದ್ದಾರೆ. Charity Dinner (ಧರ್ಮದೂಟ!) ಅನ್ನು ಪ್ರಾಯೋಜಿಸಿದ ಮೆ. ನಾರ್ಮಕಾರ್ಪೋರೇಶನ್ನವರು ಕೊಡಬೇಕಾಗಿದ್ದ ಸಹಾಯ ಧನವನ್ನು ಇನ್ನೂ ನೀಡಿಲ್ಲ. ಆದ್ದರಿಂದ ಹೊಂದಿಸಿಕೊಡಲು ತಡವಾಯಿತು ಎಂದು ತಿಳಿಸಿದ್ದಾರೆ. ಎರಡು ತಿಂಗಳೊಳಗೆ ಎಲ್ಲಾ ಹಣವನ್ನು ಕೊಡುವುದಾಗಿ ಸ್ವತಃ ಅಮಿತಾಬ್ ಬಚ್ಚನ್ ಅವರೇ ಫೋನಿನ ಮೂಲಕ ಸ್ಪಾಸ್ಟಿಕ್ ಸೊಸೈಟಿ ಆಫ್ ಇಂಡಿಯಾದ ಅಧ್ಯಕ್ಷ ಆದೀಫ್ ಚೌಧರಿಯವರಿಗೆ ತಿಳಿಸಿದ್ದಾರೆಂದು ಅಧ್ಯಕ್ಷರೆ ತಿಳಿಸಿದ್ದಾರೆ. ನೆಲ ಅಂತಸ್ತು, ಮೊದಲ ಅಂತಸ್ತಿನ ಸ್ವಲ್ಪ ಭಾಗ ಮುಗಿದಿರುವ ಆಸ್ಪತ್ರೆ (ಸ್ಪಾಸ್ಟಿಕ್ ಮಕ್ಕಳಿಗಾಗಿ)ಯು ABCL ನವರಿಂದ ಇನ್ನೆಷ್ಟು ಕಾಲ ಸ್ಥಗಿತಗೊಳ್ಳಬೇಕು ನೋಡಬೇಕು!

*ಕೃಪೆ : ಟೈಮ್ಸ್ ಆಫ್ ಇಂಡಿಯಾ*

# ಸಾಲುಮರದ ತಿಮ್ಮಕ್ಕನ ಜೊತೆ ಮರದ ನೆರಳಿನಲ್ಲಿ ಒಂದೆರಡು ಗಳಿಗೆ

ಸಾಲು ಮರದ ತಿಮ್ಮಕ್ಕನವರೊಡನೆ ಮಾತನಾಡಲು ಅವರ ಊರಿಗೆ ಹೋದಾಗ, ಅವರ ಅನುಭವಗಳನ್ನು ನಮ್ಮೊಂದಿಗೆ ಹಂಚಿಕೊಂಡರು. ಅವರದೇ ಮಾತಿನಲ್ಲಿ ಅವರ ಅನುಭವಗಳನ್ನು 'ಮಾನಸ' ಓದುಗರಿಗಾಗಿ ಪ್ರಕಟಿಸಿದ್ದೇವೆ.

ಬರ್ರಿ ಬರ್ರಿ ನೀವ್ ಬತ್ತಿರಿ ಅಂತ ಗೊತ್ತಿತ್ತು ನಂಗೆ ನೆನ್ನೆ ರಾತ್ರಿ ಕಟ್ನೆಕಾಯ್ ಕಟ್ಟಿರತಾವ ಗೌಳ್‌ಗೋಳ್ (ಹಲ್ಲಿ) ಲಕಲಕ ಅಂತ್ಲೇ ಇದ್‌ವು, ಆಗ್ಲೆ ಗೊತ್ ಮಾಡ್‌ಕಂಡೆ ಉಗಾದ್‌ಗೆ ಬತ್ತರೆ ಯಾರೂ ಅಂತ ಕುಂತ್ಕ ಬನ್ನಿ ಅಂತ ಚಾಪೆ ಹಾಸಿದ್ರು. ಕುಡಿಯಕ್ ನೀರ್ ತಂದ್ ಕೊಟ್ರು. ಆಗ್‌ತಾನೆ ಎಡೆ ಆಕಿ, ದೇವರ್‌ತವ, ಕಟ್ನೆಕಾಯಿ ತವ, ಕುದ್ರೆ ಕಾಲತ್‌ವ (ಕುದುರೆಲಾಳ ಬಾಗಿಲಿಗೆ ಕಟ್ಟಿದ್ರು) ಒಸ್‌ಲ್‌ಗೆ ಅಚ್ಚಿದ್ ಉದ್‌ಕಡ್ಡಿ ವಾಸ್ನೆ ಮನೆಯೆಲ್ಲ ಒಡಿತಿತ್ತು. ಬೇವ್‌ನೆಲೆ ಕಡ್ಲೆ ಬೆಲ್ಲ ಬೆರ್‌ಸಿದ್ದನ್ನ ತಿನ್ನಿ ಅಂತ ತಂದ್‌ಕೊಟ್ರು. ಬಾಳೆಹಣ್ಣು, ಬೇಕ್ರಿ ಇಂದ ತಂದು ಎಡೆಮಾಡಿದ್ದ ದಿಲ್‌ಖುಷ್ ತಂದ್ ಕೊಟ್ರು ತಿನ್ನಕೆ.

ಮಡ್‌ಕೆ ಒಳ್‌ಗಿದ್ದ ಪದಕ ತಂದು, ಇದೆಯಾ ಕೊಟ್ಟಿದ್ದು ಅಂತ ಮಾತ್ ಮುಂದ್‌ವರ್ಸಿದ್ರು.

ತಾಯಿ ಈ ಜೀವ ಇಂತ ಕೆಲ್ಸಾ ಮಾಡಿಲ್ಲ ಅನ್ನಂಗಿಲ್ಲ. ಗಾಡಿ ಮ್ಯಾಲೊಂದು ಅತ್‌ಲಿಲ್ಲ, ಮೇಣಮ್ಯಾಲೆ ಕೈಯಿಕ್ಕಿ ನೆಗ್‌ಲೂಡಿಲ್ಲ, ಈ ಎಲ್ಡ್ ಬದ್‌ಕ್ ಬಿಟ್ರೆ ಇನ್ ಎಲ್ಲ ಮಾಡಿದೀನಿ.

40-45 ಗುಡ್ಡೆ ಜಲ್ಲಿ ಚಚ್ಚಿದೀನಿ, ಜಲ್ಲಿ ಚೆಲ್ಲಿ ಕರ್‌ಲ್ ಮಣ್ ಆಕಿ, ಮ್ಯಾಲ್ ಮಳ್ ಆಕಿ, ರೋಲ್ ಒಡ್‌ದು ರೋಡಿನ್ ಕೆಲ್ಸ ಮಾಡಿದೀನಿ. ಆಗೆಲ್ಲ ಈಗ ನಂಗೆ ಟಾರ್ ಆಕ ಮಿಶಿನ್ ಇರ್ಲಿಲ್ಲ. ಸುಗ್‌ನಳ್ಳಿ ಆಚೆ ಬನ್‌ಪಾಳ್ಯದ್‌ವರ್ಗೂ ರೋಡ್ ಮಾಡಿದೀನಿ. ಮಣ್ ಒತ್ತು ಕೂಲಿ ಮಾಡಿದೀನಿ, ಇಟ್‌ಗೆ ಒತ್ತಿದೀನಿ. ಗದ್ದೆಗ್ ಮಟ್ಟ ಆಕದು, ವಲ್‌ಕ್ಕೆ ಮಟ್ಟ ಆಕದು, ರಾಗಿ ಮಾಡಿದೀನಿ, ರಾಗಿ ಬೀಸಿದೀನಿ, ಭತ್ತ ಮಾಡಿದೀನಿ, ಭತ್ತ ಕುಟ್ಟಿದೀನಿ. ಈ ಎಲ್ಲ ಕೆಲ್ಸ ಮಾಡಿ ಪೂರೈಸಿದಿನಿ. ಯಜ್‌ಮಾನ್ರು ಆರಂಭದ್ ಕೆಲ್ಸ ಮಾಡೋರು, ದನ ಕುರಿ ಮೇಸೊರು.

ಮಕ್‌ಳಾಗಿಲ್ಲ ಅಂತ ವಸಿ ಕಷ್ಟ ಅನ್‌ಭೋಗ್‌ಸಿಲ್ಲ ನಾನು. ಅತ್ತೆ, ಮೈದ, ಗಂಡ ಎಲ್ರುವೇ ಉರ್ಕಂಡ್ ತಿನ್ನೋರು. ನಮ್ಮತ್ತೆ ಅಂತುವೆ ಒರ್ಲೆ ಹೆಂಗ್‌ಸು, ಒಳ್‌ಗೆ ಗಂಡ್ಸು, $4^1/_2$ ರೂಪಾಯಿಂದ್ ಸೀರೆ 3 ಆಣೆ ಜಾಕೀಟಷ್ಟೆ ಕೊಡ್ತಾ ಇದ್ದುದ್ದು ವರ್ಷವೆಲ್ಲ ಆಕ್ಯಳೆ.

ಒಂದ್ಸಲ ತೊಗ್‌ರಿ ಕಾಯ್ ಮೂಡೆ ಕಟ್‌ತ್ತಿದ್ರು, ಯಾವ್‌ದೂ ಮಾತ್‌ಗೆ ಕುತ್‌ಗೆ ಸಿರ ಬಗ್ಸಿ ಗುದ್ದಿ ನಡಿ ನಿನ್ನಮ್ಮನ್ ಅಂದ್ರು, ಇಂದ್ಕೆ ತಿರ್‌ಗ್ ನೋಡ್ದಂಗೆ ತೌರ್ ಮನ್‌ಗೆ ಒಂಟೊಗಿದ್ದೆ. ನಡ್ಕಂಡೆ ಒಂಟೊಗಿದ್ದೆ. ನನ್ ತೌರ್ ಮನೆ ಗುಬ್ಬಿತವ ವಸಳ್ಳಿ. ಕರ್ಕಂಡ್ ಬಾ ಅಂತ ಒಂದ್ ಉಡ್‌ಗಿಯಾ ಇಂದೇಲೆ ಕಳಿಸಿದ್ರು ನಂತಾವ್ ಇದ್ ಬೀಗ್‌ದೇಸಲ್‌ನ ತಾಂಡೋಗು ಅಂತ ಎಸ್ದು ಒಂಟೋಗಿದ್ದೆ. ಕತ್ಲಾಗ್ ಬುಡ್ತು ಓಗ್ತ ದಾರೀಲಿರೊ ಹಳ್ಳಿಲಿ ನಮ್ಮೂರ್ ಉಡ್‌ಗಿ ಇದ್ಲು. ಅವರ್ ಮನ್‌ಲಿ ರಾತ್ರಿ ಇದ್ದು ಬೆಳಿಗ್ಗೆಗೆ ನಮ್ಮೂರ್‌ಗೆ ಒಂಟೊದೆ.

ಕರ್ಕಂಡ್ ಬಾ ಅಂತ ಯಜ್‌ಮಾನ್ರು ಯಾರ್ನೊ ಕಳ್ಸಿದ್ರು. ನೀನ್ಯಾಕ್ ಬಂದೆ ಕರ್ಕಂಡ್ ಬರಾಕೆ ನೀನಾ ಬೈಯ್ದೋನು, ನೀನಾ ಒಡ್ದೋನು ಅಂತ ಗದರ್ದೆ ಬಂದಿದ್ದೋನ್ ಮ್ಯಾಲೆ. ನನ್ನ ತಮ್ಮ ಸಮಾಧಾನ ಮಾಡ್ದ. ಆಮ್ಯಾಲೆ ಬಂದಿದ್ದೋರ್‌ಗೆ ಕೋಳಿ ಕುಯ್ದು ಅಡ್ಗೆ ಮಾಡ್ಸಿ, ಉಣ್ಣಾಕಾಕ್ಸಿ ಕರ್ಕೊಂಡ್ ಒಗಪ್ಪ ಅಂತ ಜತೇಲಿ ಕಳ್‌ಸ್ದ. ನಾನೂವೆ ಬಂದು ಯಜ್‌ಮಾನ್ರುಗೆ ಕೋಳಿಸಾರ್ ಮಾಡಿ ಉಣ್ಣಾಕಾಕ್ದೆ.

ನಮ್ಮಳ್ಳಿಲಿ ಯಾರು ಇಡ್ಕೊಂಡ್ ಒಗಾಕೆ ಬರ್ದೆ ತಪ್ಸ್‌ಕಂಡ ಬಂದ್ ದನ್‌ಗೋಳ ಪಂಡಿನ್ ಮನ್‌ಲಿ ಕೂಡ್ತಿದ್ರು. ಒಂದೊಂದ್ ಸಾರಿ 2-3 ದಿನ್‌ವಾದ್ರು ದನ ಉಡಿಕ್ಕಂಡು ಯಾರೂ ಬತ್ತಾಯಿರ್ಲಿಲ್ಲ. ಪಾಪ ದನ್‌ಗೋಳು ಅಸ್ದು, ಬಾಯಾರಿ ಬಡ್ಕಳೊವು. ಆ ದನ್‌ಗೊಳ್ಗೆ ಉಲ್ಲು, ನೀರು ಆಕ್ತಾ ಇದ್‌ವಿ.

ಊರಿನ್ ಜಾತ್ರೆಗೆ ನೀರಿನ್ ತೊಂದ್ರೆ ಆಗಾದು ಆಗ ಯಜ್‌ಮಾನ್ರು ಉದಿ ಆಕಿ ತೊರೆಗೆ, 6 ಅಡಿ ನೀರ್ ನಿಲ್ಲಂಗ್ ಮಾಡಿದ್ರು, ಜಾತ್ರೆಗ್ ಬಂದ್ ಜನ್‌ಕೆ ಕುಡಿಯಕ್ಕೆ, ಮೈತೊಳ್ಕಳಕೆ, ದನ ಪನ ತೊಳೆಯಕೆ ನೀರಾಗ್ಲಿ ಅಂತ. ಏನ್ ಪುಣ್ಯದ್ ಕೆಲ್ಸ ಮಾಡಿರೂ ಏನ್ ಆಗ್ಲಿಲ್ಲ ಅಂದ್‌ಕಂಡ್‌ವಿ. ದೇವ್‌ರೇನ್ ಬುದ್ದಿ ಕೊಟ್ನೊ ಮರ ಆಕನಾ ಅಂದ್‌ಕಂಡ್ರು ಯಜ್‌ಮಾನ್ರು ಅವಾಗ್‌ನಿಂದ ಮರ ಆಕಾಕೆ ಶುರುವ್ ಮಾಡ್ಕಂಡ್‌ವಿ. 40 ವರ್ಷದ್ ಮೇಲಾತು. ಊರಾಗ್ ಇದ್ ಆಲದ್ ಮರದ್ ಕಡ್ಡಿನಾ ಕಡ್ಕಂಡ್ ಬರೋರು, ಗುಣಿ ತೋಡದು, ಕಡ್ಡಿ ನೆಟ್ ಬರಾದು ಮಾರ್‌ನೆ ದಿನ್ ಬೆಳಿಗ್ಗೆ ಒಗಿ ನೀರುಯ್ಯದು, ಕಡ್ಡಿ ಸುತ್ತ ಭದ್ರ್‌ವಾಗಿ ಮುಳ್‌ಕಟ್ಟದು, ಮ್ಯಾಕೆ ದನ ಬಾಯಾಕ್‌ಬಾರ್ದು ಅಂತ. ನಾನು ತಲೆ ಮ್ಯಾಲೆ, ಕಂಕ್‌ಳಾಗೆ ಗಡಿಗೆ ಒತ್ಕಂಡ್

ನೀರೂದ್ರೆ, ಯಜ್‌ಮಾನ್ರು ಅಡ್ಡೆಲಿ ನೀರೋತ್ಕ್ಂಡೋಗಿ ಉಯ್ಯೋರು. ಮದ್ದಿಗೆ ಅಟ್ಟಲ್ಲಿದ್ದ ಸೀನೀರ್ ಬಾವಿಯಿಂದ ನೀರ್ ತಾಂಡೊಗ್ತ ಇದ್‌ವಿ. ಮುಂದ್‌ಕೆ ತೊರೆ ನೀರ್ ತಗಂಡು ಬಾರೆ ತಕ ಇರೊ ಸಸ್‌ಗೋಳ್ಗೆ ಉಯ್ಯೋದು, ಬಾರೆ ಆದ್ಮೇಲ್ ಒಂದ್ ಕಟ್ಟೆ ಇತ್ತು, ಕಟ್ಟೆ ನೀರ್ ತಗಂಡ್ ಉಯ್ತಾ ಇದ್‌ವಿ. ಕಟ್ಟೆ ಆದ್ ಮ್ಯಾಲೆ ಮುಂದ್‌ಕೆ ಕಲ್ಯಾಣಿ ಇತ್ತು. ಕಲ್ಯಾಣೀಲಿ ನೀರ್ ತಗಂಡ್ ಉಯ್ಕೊಂಡ್ ಒದ್ರೆ ಕೆಳೀಕೆ ಅಗ್ಸ್‌ನಾಗ್ ಒಂದ್ ಗುಂಡಿ ಇತ್ತು. ಗುಂಡೀಲ್ ನೀರ್ ತಗಂಡ ಅಕ್ಕಂಡೊದ್ರೆ ಕುದೂರ್ ಸಿಗದು. ಕುದೂರ್ ತೋಪಯ್ಯನ ಮನೇಲಿ ಕಲ್ಯಾಣತ್ತು. ಅಲ್ಲಿಂದ ನೀರ್ ತಗಂಡ್ ಉಯ್ತ ಇದ್‌ವಿ. ಇಂಗೆಯಾ ವರ್ಸ್‌ಕ್ 11-12 ಕಡ್ಡಿ ನೆಟ್ ಬೆಳ್‌ಸಿವ್ವು. ಒಂದ್ಸಲ ಯಾವ್ದೊ ಕಾರ್ಯಕ್ ಕೊಂಬೆ ಬೇಕಾಗಿತ್ತು, ಯಜಮಾನ್ರು ಕಡ್ಕಂಡ್ ಬತ್ತಾ ಇದ್ರು. ಬರೊವಾಗ್ಗೆ ಪೋಲಿಸೊರು ಮರ ಕದ್ದ ಅಂತ ಟೇಸನಿಗ್ ಕರ್ಕೊಂಡ್ ಒಗಿ ಒಂದಿನ್‌ವೆಲ್ಲ ಟೇಸನ್ನಲ್ಲಿ ಮಾಡಿಕ್ಕಂಡ್ ಬುಟ್ಟಿದ್ರು. ನಮ್ ಸಂಬಂಧಿಕ್‌ರ್ ಉಡ್ಗ ಒಗಿ ಬಿಡಸ್ಕಂಡ್ ಬಂದ. ಪೋಲಿಸೋಗ್ರುವೆ ಯಜಮಾನ್ರುಗುವೆ ಅಷ್ಟಕಷ್ಟೆ ಆಗಿತ್ತು. ಅದೆ ನೆವ ಮಾಡ್ಕಂಡ್ ಪೋಲಿಸೋನು ಒಳಿಗಾಕಿದ್ದ.

ತಬ್ಬಲ್ ಮಕ್ಕಳ್‌ನ್ ಸಾಕ್ದಂಗೆ ಸಾಕ್‌ದ್‌ವಿ ಮರ್‌ಗೋಳ, ಅನಾದ್ರಿಗೊಳ್ಗೆ ಆಕಾಶ್‌ವೆ ಕಾವಲು, ದೇವರ್ ದಯೆ ಇತ್ತು, ಗಿಡ್‌ಗೊಳ್ ಚೆಂದಾಗ್ ಬೆಳ್ಕಂಡ್‌ವು. ಮರ ಬೇಳಿಸಿದ್ದಕೆ ಸುಗ್ಗನಹಳ್ಳಿ ಜಾತ್ರೇಲಿ ಯಜ್‌ಮಾನ್ರುಗೆ ಪದ್‌ಕ ಕೊಟ್ರು (1958ರಲ್ಲಿ). ಮನೆಯಿಂದ ಹೊರಟು ತಿಮ್ಮಕ್ಕನ ಮರ್‌ಗಳ ನೆರಳಲ್ಲಿ ಬಂದು ಕೂತ್‌ವಿ.

ತಿಮ್ಮಕ್ಕ ಮತ್ತೆ ಮಾತ್ತಾಡಿದ್ರು. ನಾವೀಗ್ ಕೂತ್ಕಂಡ್ ಮಾತಾಡ್ತ ಇರಾದು ಅಕ್ ತಂಗೀರ್ ಜತಿಲ್ ಕುತ್ಕಂಡ್ ಮಾತಾಡ್ದಂಗೆತಲ್ವಾ ಅಂತ ನಕ್ರು. ಆಮೇಲೆ ಕಿವ್‌ಗೊಟ್ ಕೇಳ್‌ಸ್ಕಳಿ ಅಂದ್ರು - ಗಿಣಗಳು ಇನ್ಯಾವುದೊ ಪಕ್ಸಿಗಳು ಕಿಚಪಚ ಅಂತಿದ್‌ವು. ಮರ್‌ವೆಲ್ಲ ಫಲ ತುಂಬ್ ಕಂಡ್ಕೈತೆ, ತಿನ್ನಕೆ ಪಕ್ಸ್‌ಗೋಳ್ ಬತ್ತವೆ. ಇಂತವ್ ತಿಂದಿಲ್ಲ ಫಲ ಅನ್ನಂಗಿಲ್ಲ, ಗಿಣಿ, ಕಾಗೆ, ಮ್ಯಾಕೆ, ನಾಯಿ, ಅಂದಿಯಾಗುವೆ ಮರದ್ ಅಣ್ಣು ಸೊಪ್ಪು ತಿಂದ್ ಬೆಳ್‌ದವೆ. ಎಷ್ಟರ್ ಮಟ್‌ಗ್ ಸುಂಗಾರ್‌ವಾಗ್ ಬೆಳ್ಕಂಡವೆ ನೋಡು ಎಷ್ಟ್ ಚೆಂದಾಗಿ, ಎಷ್ಟ್ ನಯಸ್ಸಾಗಿ, ಗುಳೆ ಒಡ್ಕಂಡ್‌ವೆ ನೋಡು, ಒಂದ್ ಮರವು ಗಂಟ್ಯಾಗ್ಲಿಲ್ಲ, ಬ್ಯಾರೆ ಮರ್‌ಗೊಳ್ ಬರಿ ಗಂಟ್ಲು.

ಬರೀ ಕಷ್ಟನೇ ಪೆಟ್ಟೆ, ಕಣ್ ತಾಯೇ ಈಗ್ ಇದರ್ ಕಣ್ ಬಂದ್ 3 ವರ್ಸಾಗಿ 2 ತಿಂಗ್‌ಳಾತು. ಡಲ್ಲಿಗ್ ಕರ್ಕೊಂಡ್ ಒಗಿ ಪದ್‌ಕ ಕೊಡ್‌ಸೀರು. ಎಲ್ಲೂವರ್ ದಿನ ರೈಲ್‌ನಾಗೆ ಒದೆ. ಊರ್‌ಗೆ ಕಾಗ್ದ ಆಕ್ಸಿದ್ದೆ. ಇಂಗೆ ಡಲ್ಲಿ ಒಳ್‌ಗೆ ಪದ್‌ಕ ಕೊಡಕ್ ಕರ್‌ದ್‌ವ್ರೆ ಬರ್‍ರಿ ಯಾರಾರುವೆ ಅಂತೆ. ಕಳ್ಸಕ್ಕೆ ಯಾರೂ ಬಲ್ಲಿಲ್ಲ. ಇದೇನೊ ಅಪ್‌ರೂಪ್‌ಕೆ ಆಟೊಂದ್ ದೂರ್ ಹೋಗಿ ಪದ್‌ಕ ತಗಳಕ್ಕೆ ಒಯ್ತಾ ಇದೀನಿ ನನ್ನೋರು ಅನ್ನೋರು ಯಾರು ಇಲ್ಲಾಂಗಾಯ್ತೆ ಅಂತ ಕಣ್ಣಾಗ್ ನೀರ್ ಬಂದ್‌ವು. ಜತಿಲಿದ್ದೋರು ಯಾಕೆ ಅಂತ ಜುಲ್ಮೆ ಮಾಡಿ ಕೇಳಿರು. ಇಂಗೆ ಅಂದೆ. ಅದ್‌ಕವ್‌ರು ನಾವ್ ನಿಮ್ಮೊರಲ್ವಾ ಅಂತ ಸಮಾಧಾನ ಮಾಡೀರು.

ಅಲ್ಗೋದ್ ಮ್ಯಾಲೆ ಉಣ್ಣಾಕೆ, ಉಳ್ಕಳ್ಳಕ್ಕೆ ಏನ್ ಕಷ್ಟನೂ ಬರ್‍ದಂಗ್ ನೋಡ್‌ಕಂಡ್ರು. ನಾಕ್ ಬನ್ ಪೀಸು, ಮೊಟ್ಟೆ ಆಮ್ಲೇಟು ತಿನ್ನೀವಿ ಇನ್ನೇನು ಎಚ್ಚಗೆ ಎಣ್ಣೇಲ್ ಪಣ್ಣೇಲ್ ಮಾಡಿದ್ ತಿಂತುರ್‌ಲಿಲ್ಲ. ದೊಡ್ಡ್ ಪಂಪ್ಸನ್ (Function) ಮಾಡಿ ಶಾಲ್ ಒದ್‌ಸಿ, ಆಗ ಮನೆಲಿರೊ ಪೋಟೋನುವೆ, ಪದ್‌ಕನುವೆ ಕೊಟ್ರು. ಪ್ರದಾನ್‌ಮಂತ್ರಿಗೊಳೆ ಕೈಯಾರೆ ಕುತ್ಗೆಗ್ ಪದ್‌ಕ ಆಕಿರು. ಆಮೇಲೆ ಇಂದ್ರಾಗಾಂದಿಯಾ ಕೊಲೆ ಮಾಡಿದ್ ಮನೆ, ಮಣ್ ಮಾಡಿರ ಜಾಗನ್ನೆಲ್ಲ ನೋಡ್ಕಂಡ್ ಬಂದೆ. ಎಲ್ಲೂ ನಡಿಲ್ಲಿಲ್ಲ. ಕಾರಾಗೆ ಕರ್ಕೊಂಡೋಗಿ ಕಾರಾಗೆ ಕರ್ಕಂಡ್ ಬರೋರು. ಪಾತಾಳ್ ರೈಲ್‌ನಾಗೂ ಓಗಿ ಬಂದೆ.

ಬಂದ್ ಮೇಲೂವೆ ಜನ ಬತ್ತರೆ ಕರ್ಕಂಡೊಯ್ತರೆ. ಸಿಂಪಾಸನದ್ ಮ್ಯಾಲ್ ಕೂಡ್ಸಿ ಬೊಮಾನ ಕೊಡ್ತರೆ. ಸೀರ್ಗೋಳು, ಚಾಗೀಟು, ಲೋಟ, ತಟ್ಟೆ ಪದ್‌ಕಾ ಎಲ್ಲ ಕೊಟ್ಟವ್ರೆ. ಡೆಲ್ಲಿದಿನ್ನುವೆ ದುಡ್ಡ್ ಬಂದಿಲ್ಲ. ಮನ್ನೆ ದಿನದ್ ಪಂಪ್ಸ್‌ನಲ್ಲಿ, ತಿಳ್‌ದೊರೊಬ್ರು ಅದೇನ್ ಬರಂಗಿಲ್ಲ, ಮರ್ತ್‌ಕಂಡ್ ಬಿಡಜ್ಜಿ ಅಂದ್ರು. ಪದ್‌ಕ್‌ದ ಕತೆ ಏನೇಳ್ತಿಯವ್ವ ಸುರಿತದವ್ವ ಬಂಗಾರ, ಆಲೆ ಬಣ್‌ಬಿಟ್‌ಗಂಡೈತೆ ಅಂದ್ರು. ಅಂತುವೆ ಬಾಳ ವನ್‌ವಾಸ ಪಟ್ಟೆ ನಾನು ಈಗ ಸುಖ ಉಣ್ತಾ ಇದೀನಿ. ಯಾರ್ ದರ್‍ದು ಇಲ್ಲಾ ನಂಗೆ, ಸಾಲ್‌ಮರ್‌ದ್ ತಿಮ್ಮಕ್ಕ ಸತ್ಲು ಅಂತ ಏನಾರೂ ಗೊತ್ತಾದ್ರೆ ಸಾಕು, ಜನ ಫೋನಲ್ಲೆ ತಿಳ್ಕಂಡ್ ಕಾರ್‌ಗುಳಾಗ್ ಬಂದು ಉವಾ ಹಾಕಿ ಅವರ್‍ರೆ ಗುಂಡಿ ತೋಡ್ ಅದ್ದೂರ್‌ಯಾಗಿ ಮಣ್ ಮಾಡ್ತಾರೆ.

ನನ್ನ ಗಂಡ ಯಾವ್ ದೇಸ್ದಾಗವ್‌ರೊ, ಯಾವಣ್ಣು ಅಂಷ್ಟು ತಿನ್ನಂಡವ್‌ರೊ, ಯಾರ್ ಮನೆ ಕಡ್ಡಿ ಕರ್ಪೂರ್‍ದೊಗೆ ಕುಡ್ಕಂಡವ್ರೋ ನಂಗೀ ಪುಣ್ಯ ಸಿಕ್ಕೈತೆ..... ಮಾತಾಡ್ತನೆ ಬೇಡ ಬೇಡ ಅಂದ್ರು ಬಸ್‌ಸ್ಟ್ಯಾಂಡ್‌ವರ್‍ಗೂ ಬಂದ್ರು. ಬಸ್ ಬಂತು ಹತ್ತಿದ್‌ವಿ. ಕಾಣೊವರ್‍ಗು ತಿಮ್ಮಕ್ಕ ನಿತ್ಕಂಡ್ ಕೈ ಬೀಸ್ತಾನೆ ಇದ್ರು, ತಿಮ್ಮಕ್ಕನ ಸಾಲು ಮರದ ನೆರಳಲ್ಲಿ ತುಂಬಿ ತುಳ್ಕಾತಾ ಇದ್ ಬಸ್ಸ್ ಹೋಗ್ತಾ ಇತ್ತು.

●

# ಸಾಲು ಮರದ ತಿಮ್ಮಕ್ಕ

ತೊಟ್ಟಿಲಾಡದ ಮಡಿಲು ಬರಿ ಒಡಲು
ಉರಿ ಒಡಲ್ಲು, ಬಂಜೆಯೆಂಬ ಬಿರುದಿಗೆ
ಬಿರುಕು ಬಿಡದೆದೆಯು
ಹಗಲು ದೀಪ ಹಚ್ಚಿ ಹುಡುಕಿ, ತಡಕಿ,
ಕದ ಮುಚ್ಚಿದ ಹಾದಿ
ಕರೆದೊಯ್ಯಿತೆ ನಿನ್ನ ಕಂಡರಿಯದ ಈ ಕಾಯಕಕ್ಕೆ.

ವರುಷ, ವರುಷವೂ ಕಡಿದ ಕೊಂಬೆಗಳು ಕೊರಡಾಗಲಿಲ್ಲ
ಉರುವಲಾಗಲಿಲ್ಲ ನಿನ್ನ ಮನೆಗೆ
ಅಗೆದ ನೆಲಕ್ಕಿಳಿದು ಬೇರು ಬಿಡುತ್ತಿದ್ದ ಹಾಗೆ
ಕೊಂಬೆ ಕೊನರಿ ಎಳೆಬಿಸಿಲಿಗೆ ಫಳಕ್ಕೆಂದು ನಕ್ಕಾಗ
ನಿನ್ನ ಮುಖದಲ್ಲೆಂಥ ಮಂದಹಾಸ!

ಹೊತ್ತ ಹೊದಿಕೆಯ ಒದ್ದು ಹೊರಬಂದ
"ಹೊತ್ತು" ಗೊತ್ತಾಗಲಿಲ್ಲ ನಿನಗೆ
ಕಂಡ ಕಂಡ ಕರೆ ಕಟ್ಟೆ, ಕುಂಟೆ ಕಲ್ಯಾಣಿಗಳಲಿ
ಬಗೆ ಬಗೆದು ನೀ ಮೊಗೆದ ನೀರು
ಬರಿ ನೀರಲ್ಲ, ನೋವ ಹೂವಾಗಿಸಿದ ನೀರು.

ಜೊತೆ ಜೊತೆಯಾಗಿ ಹೆಜ್ಜೆ ಹಾಕಿದೆ ನೀನು
ಒಡಲೊಳಗಡಗಿದ ಬೆಂಕಿಯ ಬುಗಿಲಿಗೆ
ಸುಟ್ಟು ಬೂದಿಯಾಗುವ ಬದಲು
ಹಸಿರಾಗಿಸಿದೆ ನೆಲವ
ನೀ ನೆಟ್ಟ ಮರದ ನೆರಳಲ್ಲಿ
ಬಿಟ್ಟ ನಿಟ್ಟುಸಿರು
ಆಕಾಶದಗಲ ಹರಡಿದ ರಂಬೆ ಕೊಂಬೆಗಳಲ್ಲಿ ಗೂಡು ಕಟ್ಟಿದೆ.

ಸುಡುವ ನೆತ್ತಿಯಡಿಯ ನೆರಳು
ಸಾಲು ಸಾಲು ಮರದ ನಿನ್ನೊಡಲು
ಸಿರಿ ಸೂರು ಬೇಡದ
ಇದೆಂಥ ಕಾಯಕಲ್ಪ
ನಿನ್ನೆದೆಯ ಸಂಕಲ್ಪ

*- ರಾಜೇಶ್ವರಿ ಹೆಚ್. ಎಸ್.*

# ಅವೇ ಪುಸ್ತಕಗಳು

ಓದಿದ ಪುಸ್ತಕಗಳನ್ನೆಲ್ಲಾ
ಕತ್ತಲು ಕೋಣೆಯಲ್ಲಿ
ಪೇರಿಸಿ ಬೀಗ ಹಾಕಿ
ಅರೆದು ಕುಡಿದಂಥ ಮತ್ತಿನಲ್ಲಿ
ಬೀಗಿ ಮಾತಾಡುತ್ತಿದ್ದಳು !

ಯಾಕೋ ಹೊರಗೆಲ್ಲಾ
ಕತ್ತಲಾದಂತೆನಿಸಿ
ಜಡವಾಗಿಯೇ
ಆ ಕತ್ತಲು ಕೋಣೆಯ
ಬೀಗ ಒಡೆದಳು!

ಅರೆರೆ! ಅರೆರೆ!
ಒಡೆದ ಹೆಂಚಿಂದ
ಅಲ್ಲೊಂದು ಸೂರ್ಯಕಿರಣ!
ಓದಿದೆಲ್ಲ ಪುಸ್ತಕಗಳ
ಸಾಲುಸಾಲಿನ ನಡುವೆ
ಬಣ್ಣ ಬಣ್ಣದ ಶಾಯಿಯ
ಹೊಸ ಭಾಷ್ಯ ಮೂಡಿತ್ತು!

'ಅಯ್ಯೋ ನಾನು ಓದಿರಲೇ ಇಲ್ಲ'
ಎಂದುಕೊಳ್ಳುತ್ತಾ
ಧೂಳೊರಸಿ ಕುಳಿತಳು
ಮತ್ತೆ ಅಧ್ಯಯನಕ್ಕೆ!

*- ಎಸ್. ಮಾಲತಿ*

# ಒಂದು ಸಂವತ್ಸರ ಚಕ್ರ - ವಿಮರ್ಶೆ

ಡಾ. ಎಸ್. ವಿ. ಪ್ರಭಾವತಿ

ಆಕಾಶವಾಣಿ ಕಲಾವಿದೆಯಾಗಿ, ಕತೆಗಾರ್ತಿಯಾಗಿ, ಅನುವಾದಕಿಯಾಗಿ, ಕನ್ನಡದ ಹಿರಿಯ ಲೇಖಕಿಯಾಗಿ, ಅನೇಕ ಚಳವಳಿಗಳಲ್ಲಿ ಭಾಗವಹಿಸಿ ಸಾರಸ್ವತ ಲೋಕಕ್ಕೆ ಚಿರಪರಿಚಿತರಾಗಿರುವ ಶ್ರೀಮತಿ ಹೆಚ್. ಎಸ್. ಪಾರ್ವತಿಯವರ ಇದುವರೆಗಿನ ಸುಮಾರು ಮೂರು ದಶಕಗಳ ಸಾಹಿತ್ಯ ಕೃಷಿಗೆ ತಿಲಕ ಪ್ರಾಯವಾದ ಕೃತಿ "ಒಂದು ಸಂವತ್ಸರ ಚಕ್ರ". ಕಾದಂಬರಿಯ ಹೆಸರೇ ಹೇಳುವಂತೆ ಒಂದು ಚಕ್ರದ ಅರವತ್ತು ಸಂವತ್ಸರಗಳಲ್ಲಿ ಒಂದು ಹೆಣ್ಣಿನ ಕತೆ ಬಿಚ್ಚಿಕೊಳ್ಳುವುದೇ ಇದರ ವಸ್ತು. ಈಗಾಗಲೇ ಗುರುತಿಸಲಾಗಿರುವಂತೆ ಫ್ಲಾಷ್‌ಬ್ಯಾಕ್ ತಂತ್ರದಲ್ಲಿ ಕೇಂದ್ರ ಪಾತ್ರದ ಕತೆ ಹರಡಿಕೊಳ್ಳುವುದು ಇಲ್ಲಿಯ ಒಂದು ತಂತ್ರವಾದರೂ ಈ ತಂತ್ರವನ್ನು ಮೀರಿಸಿದ ಕಲೆಗಾರಿಕೆ ಇಲ್ಲಿದೆ. ಹೆಣ್ಣಿನ ಬದುಕಿನ ಅನನ್ಯ ಅನುಭವಗಳನ್ನು ಕಲಾತ್ಮಕವಾಗಿ ತೆರೆದಿಡುವ ಈ ಕೃತಿಯಲ್ಲಿ ಕೆಲವು ಸ್ತ್ರೀವಾದೀ ಲೇಖಕಿಯರಂತೆ ಕಪ್ಪು ಬಿಳುಪಿನ ಚಿತ್ರಣವಿಲ್ಲ, ರಕ್ತ ಮಾಂಸಗಳ ಸಹಜ ಪಾತ್ರಗಳಿವೆ. ಪುರಾಣ, ಮಹಾಕಾವ್ಯಗಳ ಸ್ತ್ರೀ ಪಾತ್ರಗಳಾದ ದ್ರೌಪದೀ, ಸೀತೆ, ರೇಣುಕೆ, ಅಹಲ್ಯೆ ಮೊದಲಾದವರ ಬಗ್ಗೆ ಹೊಸ ಹೊಳಹುಗಳೂ, ಸ್ತ್ರೀ ಸ್ವಾತಂತ್ರ್ಯ, ಸಮಾನತೆ, ಆರ್ಥಿಕ ಸ್ವಾವಲಂಬನೆ, ರಾಜಕೀಯ ಜಾಗೃತಿ ಮೊದಲಾದವುಗಳ ಬಗ್ಗೆ ಪರಿಪಕ್ವ ಕಲ್ಪನೆಗಳೂ ಕಾದಂಬರಿಯುದ್ದಕ್ಕೂ ಪ್ರಾಸಂಗಿಕವಾಗಿ ಬಂದಿವೆ. "ನನಗೂ ನಿನಗೂ ಅಂಟಿದ ನಂಟಿನ ಕೊನೆ ಬಲ್ಲವರಾರು ಕಾಮಾಕ್ಷಿಯೆ" ಎಂಬ ಬೇಂದ್ರೆಯವರ ಕವನದ ಸಾಲು, "ಆದದ್ದೆಲ್ಲಾ ಒಳಿತೇ ಆಯಿತು" ಎಂಬ ಪುರಂದರದಾಸರ ಪಲ್ಲವಿ, "ನೊಂದ ನೋವ ನೋಯದವರೆತ್ತ ಬಲ್ಲರು" ಎಂಬ ಅಕ್ಕನ ವಚನದ ಸಾಲು, "ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ" ಎಂಬ ಬಸವಣ್ಣನ ವಚನದ ಸಾಲು ಇವೂ ಸೊಗಸಾಗಿ ಬಳಕೆಯಾಗಿವೆ. ಲೇಖಕಿಯ ಅರವತ್ತು ವರ್ಷಗಳ ಮಾಗಿದ ಅನುಭವವೇ ಪ್ರೊ. ಲಕ್ಷ್ಮೀಬಾಯಿಯ ಮಾತುಗಳಾಗಿ ಹೊರಬರುತ್ತವೆ. ಸ್ವಾತಂತ್ರ್ಯ ಪೂರ್ವ ಕಾಲ (ಉದಾ : ಎರಡನೇ ಮಹಾಯುದ್ಧ, ಅಹಿಂಸಾತ್ಮಕ ಸತ್ಯಾಗ್ರಹ) ದಿಂದ ಹಿಡಿದು ಮೊನ್ನೆ ಮೊನ್ನೆಯ ವಿದ್ಯಮಾನದವರೆಗೆ (ಉದಾ - ಇಂದಿರಾಗಾಂಧಿಯವರ ಕೊಲೆ, ಗಂಗಾರಾಂ ಕಟ್ಟಡ ದುರಂತ) ಹರಡಿಕೊಳ್ಳುವ ವ್ಯಾಪಕ ಕಥಾವಸ್ತುವಿಗೆ ಸಾಮಾಜಿಕ, ರಾಜಕೀಯ ಆಯಾಮವೂ ದಕ್ಕಿದೆ. ಕಾದಂಬರಿಯನ್ನು ಓದುತ್ತಾ ಹೋದಂತೆ ಕನ್ನಡ ಕಾದಂಬರಿ ಪರಂಪರೆಯ ವ್ಯಾಪಕ ಹಿನ್ನೆಲೆ ತಿಳಿದಿರುವ ಯಾವುದೇ ಸಹೃದಯ ಓದುಗರಿಗಾದರೂ ಅಲ್ಲಲ್ಲಿ ಆಗಾಗ ತ್ರಿವೇಣಿಯವರ, ವೀಣಾ ಶಾಂತೇಶ್ವರ, ನೇಮಿಚಂದ್ರರ ನೆನಪು ಇಣುಕುತ್ತದೆ. ಆಗ ಎದ್ದು ತೋರುವ ಅಂಶವೆಂದರೆ ಪಾರ್ವತಿಯವರ ಮಾಗಿದ ಅನುಭವ. ಈ ಕಾದಂಬರಿಯ ಕೇಂದ್ರ ಪಾತ್ರ ಮಹಿಳೆ ಎಂಬುದೆ ಒಂದು ವಿಶೇಷ ಎಂದು ಮುನ್ನುಡಿಯಲ್ಲಿ ಎಲ್. ಎಸ್. ಶೇಷಗಿರಿರಾವ್ ಗುರುತಿಸುತ್ತಾರೆ. ಆದರೆ ತ್ರಿವೇಣಿಯವರ ಕಾದಂಬರಿಗಳಲ್ಲಿ ಆಗಲೇ ಸ್ತ್ರೀ ಕೇಂದ್ರಿತ ಪಾತ್ರಗಳು ಇದ್ದವು. ಸದಾನಂದ-ಮಿತ್ರೆಯವರ ಬಗ್ಗೆ ಕಾದಂಬರಿಯಲ್ಲಿ ಬೇಕಿರುವುದಕ್ಕಿಂತ ಹೆಚ್ಚಿನ ವಿವರವಿದೆ. ಬಹುಶಃ ಇದು ಸಮಾನಾಂತರ ಚಿತ್ರಣ ಎಂಬ ಮುನ್ನುಡಿಕಾರರ ಮಾತೂ ಮತ್ತೆ ತ್ರಿವೇಣಿ ತಮ್ಮ ಎಲ್ಲಾ ಕಾದಂಬರಿಗಳಲ್ಲೂ (ಉದಾ : ಅಪಜಯ). ಇಂತಹ ಸಮಾನಾಂತರ ಕತೆಯ ಎಳೆ ತರುತ್ತಿದ್ದರು ಎಂಬುದನ್ನು ನೆನಪಿಸುತ್ತವೆ. ಹೀಗಾಗಿ ಯಾವುದೇ ಲೇಖಕಿಯನ್ನು ನೆನಪಿಗೆ ತಂದರೂ ಪಾರ್ವತಿಯವರ ಈ ಕೃತಿಯ ಅನನ್ಯತೆ ಇರುವುದು ಶೇಷಗಿರಿರಾವ್ ಹೇಳುವಂತೆ ಹೆಣ್ಣಿಗೇ ವಿಶಿಷ್ಟವಾದ ಮೈನೆರೆಯುವುದು, ಗಂಡನ ಸಂಪರ್ಕ, ಹೆರಿಗೆಯ ಅನುಭವ, ತಾಯ್ತನ, ಹಾಲೂಡಿಸುವಿಕೆ - ಇವುಗಳ ಚಿತ್ರಣದಲ್ಲಿರುವ ಅನನ್ಯತೆ. ಆ ಅನುಭವಗಳಲ್ಲಿಯೂ ತಲೆಮಾರಿನಿಂದ ತಲೆಮಾರಿಗೆ ಆಗಿರುವ, ಆಗುತ್ತಿರುವ ವ್ಯತ್ಯಾಸಗಳನ್ನು ಬಿಡದೇ ಗುರುತಿಸಿರುವುದೊಂದು ವಿಶೇಷ.

ಎಂಟು ವರ್ಷದ ಹುಡುಗಿಯ, ಬಾಲ್ಯದ ಅನುಭವಗಳೊಂದಿಗೆ ಬಿಚ್ಚಿಕೊಳ್ಳುವ ಕಾದಂಬರಿಯು ಸಂಪ್ರದಾಯ ಶರಣರ ಹಬ್ಬ ಹರಿದಿನ, ಆಚಾರ ವಿಚಾರ, ಭಕ್ತಿ ಧರ್ಮ ನೀತಿಗಳ ಆವರಣದಲ್ಲಿಯೇ ಸುತ್ತುತ್ತಾ ಸುತ್ತಲಿನ ಅನುಭವಕ್ಕೆ ತೆರೆದುಕೊಳ್ಳುತ್ತಾ, ಬದುಕಿನ ಕಟು ವಾಸ್ತವದೊಂದಿಗೆ ಮುಖಾಮುಖಿಯಾಗುತ್ತಾ, ಕ್ರಮೇಣ ಧರ್ಮ ನಂಬಿಕೆಗಳ ಸ್ಥಾನದಲ್ಲಿ ವಿಚಾರ, ಪ್ರಶ್ನೆಗಳು ಆಕ್ರಮಿಸುತ್ತಾ, ಲಕ್ಷ್ಮೀ ಬೆಳೆಯುತ್ತಾ ಹೋದಂತೆ ಅವಳು ವಿಧ್ಯಾವಂತೆಯಾಗುವ, ಬುದ್ಧಿವಂತೆಯಾಗುವ, ಮೊದ ಮೊದಲು ವಿದ್ಯಾರ್ಜನೆಗೆ ಅಡ್ಡಿಯಾಗುವುದೆಂಬ ಕಾರಣದಿಂದ ಮದುವೆಯನ್ನು ಬೇಡವೆಂದು, ಪದವೀಧರೆಯಾಗಿ, ಉಪನ್ಯಾಸಕಿಯಾಗಿ ಲೈಂಗಿಕ

ಸಂಪರ್ಕಕ್ಕೆ ಹಾತೊರೆಯುವ ನವಿರಾದ ಎಳೆಗಳು ತೆರೆದುಕೊಳ್ಳುತ್ತಾ ಹೋಗುತ್ತವೆ. ಮಡಿವಂತಿಕೆಯ ಜನರು ಬೆಚ್ಚಿ ಬೀಳುವ ಕೆಲವು ಅನಿಸಿಕೆಗಳನ್ನು ಉದಾ ;

"ಮದುವೆಯಾಗದಿದ್ದರೂ ಪರವಾಗಿಲ್ಲ, ಗಂಡು ಕೊಡುವ ಸುಖ ಅದೆಂಥದೋ ಪರೀಕ್ಷೆ ಮಾಡಿ ಬಿಡಬೇಕು ಎಂದು ಮನಸ್ಸು ಧಾವಂತಗೊಳ್ಳುತ್ತಿತ್ತು. ಆರ್. ಎಸ್. ಕೆಯವರೊಂದಿಗೇ ಸಲಿಗೆ ಬೆಳೆಸಲೆ? ಫೈನಲ್ ಇಯರ್ ವಿದ್ಯಾರ್ಥಿ ಕುಮಾರನನ್ನು ಯಾವುದಾದರೂ ಏಕಾಂತ ಸ್ಥಳಕ್ಕೆ ಕರೆದೊಯ್ಯಲೆ?" (ಪುಟ. ೧೦೨)

"ದೇಹದ ಸಂಬಂಧ ಯಾವ ಮಹಾ ದೊಡ್ಡದು! ನಾಲ್ಕು ಸಲ ತೊಳೆದುಕೊಂಡರೆ ಶುದ್ಧವಾಗುತ್ತೆ! ಮನಸ್ಸು ಕೆಟ್ಟರೆ ಅದನ್ನು ತೊಳೆಯುವಂಥ ಯಾವ ನೀರೂ ಇಲ್ಲ.... ಮನಸ್ಸು ಹೀಗೆ ಬೇರೆಯವರ ಬೆನ್ನು ಹತ್ತಿ ಹೋಗಿರುವಾಗ ದೇಹ ಶುದ್ಧವಾಗಿದೆ ಅನ್ನುವುದರಲ್ಲಿ ಅರ್ಥವೇನು" (ಪುಟ. ೧೬೭)

"ಜನ ಹೇಳುವುದು ನಿಜ, ಮದುವೆಯಾದ ಹೆಂಡತಿಯೂ ಒಂದು ರೀತಿಯಲ್ಲಿ ವೇಶ್ಯೆಯೇ", (ಪುಟ. ೧೨೦)

ದಿಟ್ಟವಾಗಿ ಬರೆಯುವ ಪಾರ್ವತಿಯವರು ಅಷ್ಟೇ ಆರೋಗ್ಯಕರ ಮನಸ್ಸಿನಿಂದ ಲಕ್ಷ್ಮಿ ಪ್ರಸಾದರನ್ನು ದೂರ ದೂರ ಮಾಡುತ್ತಾರೆ. ವಿವಾಹ ಬಾಹಿರ ಪ್ರೇಮಕ್ಕೆ ಸಮಾಜದ ಮನ್ನಣೆ ಇಲ್ಲ ಎಂದು ಹೇಳಿ ಪ್ರಸಾದನನ್ನು ದೂರ ಮಾಡಿದ ಲಕ್ಷ್ಮಿ, ಅವನನ್ನು ಮರೆಯಲಾರದೇ ನಿದ್ರೆ ಮಾತ್ರೆ ನುಂಗಿ ಆತ್ಮಹತ್ಯೆಗೆ ಯತ್ನಿಸಿ ವಿಫಲಳಾಗಿ, ಬದುಕುವುದು ಅನಿವಾರ್ಯವಾದಾಗ ಕವಿಯುವ ವಿಷಣ್ಣತೆಯಿಂದ ಪಾರಾಗಲು ಬಯಸಿ, ಅದಕ್ಕೊಂದು ಹೊರದಾರಿ ಕಂಡುಕೊಳ್ಳುವಂತೆ ಪಿಹೆಚ್‌ಡಿಗಾಗಿ ನೋಂದಾಯಿಸುವುದು ಮತ್ತು ಓದುವುದರಲ್ಲಿ ಪ್ರಸಾದನನ್ನು ಮರೆಯುವುದು ನೋಡಿದಾಗ ವೈಯಕ್ತಿಕ ಆಸೆ ಆಮಿಷಗಳನ್ನು ಮೆಟ್ಟಲು ಜ್ಞಾನಾರ್ಜನೆ ಒಂದು ಸಾಧನೆಯಾಯಿತೆ ಅನ್ನಿಸುತ್ತದೆ. ಆದರೆ ಅದು ನಿಜವೂ ಇರಬಹುದೇನೋ! ಕಾದಂಬರಿಯ ಕೊನೆಗೆ ಗತಕಾಲದ ನೆನಪಿನಿಂದ ಎಚ್ಚೆತ್ತ ಲಕ್ಷ್ಮಿಬಾಯಿ, ಮಗ-ಸೊಸೆ ಮತ್ತು ಗಂಡನಂತೆಯೇ ತಾನೂ ಸಾಮಾನ್ಯಳಾಗಿರ ಬಯಸುವುದು ಸೊಗಸಾದ ಮುಕ್ತಾಯ ತಂದಿದೆ. "ಇದು ಮುಕ್ತ ಚಿಂತನೆಗಳಿಗೆ ಬಾಗಿಲು ತೆರೆದ ಕೃತಿ. ಮುಕ್ತವಾಗ ಬಯಸುವ ಮನಸ್ಸನ್ನು ವ್ಯಕ್ತಿ-ಸಮಾಜಗಳ ಕಟ್ಟುಗಳು ಹಿಡಿದಿಡುವ ಬಗೆಯನ್ನು ಹೇಳುವ ತುಡಿತ ಇಲ್ಲಿದೆ. 'ಮುಕ್ತತೆ'ಗೂ ಇರಬಹುದಾದ 'ಚೌಕಟ್ಟ'ನ್ನು ಕುರಿತು ಗಂಭೀರವಾಗಿ ಚರ್ಚಿಸುವ ಪ್ರಯತ್ನ ಇಲ್ಲಿದೆ' ಎಂಬ ಪ್ರಕಾಶಕರ ಬೆನ್ನುಡಿಯ ಮಾತುಗಳು ಬಹುಶಃ ಕಾದಂಬರಿಯ ವಿಶಿಷ್ಟತೆಯನ್ನು ಸರಿಯಾಗಿಯೇ ಗ್ರಹಿಸಿವೆ. ಇಂಥದೊಂದು ಕಾದಂಬರಿಯನ್ನು ಕನ್ನಡ ಸಾಹಿತ್ಯ ಲೋಕಕ್ಕೆ ಕೊಟ್ಟ ಹೆಚ್. ಎಸ್. ಪಾರ್ವತಿ ಅಭಿನಂದನಾರ್ಹರು. ಆದರೆ ಇಷ್ಟೆಲ್ಲಾ ಹೇಳಿದ ನಂತರ ಒಂದು ವಿಷಯ ಹೇಳಲೇಬೇಕು. ಅದೆಂದರೆ - ಮಹಿಳಾ ಲೇಖಕಿಯರು ಎಲ್ಲಾ ಸಮಸ್ಯೆಗಳನ್ನೂ ಸರಳೀಕರಿಸಿ ಬಿಡುತ್ತಾರೆ ಎಂದು ಇಂದಿನ ವಿಮರ್ಶಾ ಲೋಕದಲ್ಲಿ ಒಂದು ಅಪವಾದ (ದೂರು) ಇದೆ. ಅದಕ್ಕೆ ಪಾರ್ವತಿಯವರೂ ಹೊರತಾಗಿಲ್ಲ. ಮಗು ಹುಟ್ಟಿ ಬೆಳೆಯುವುದೆಂದರೆ ಹೆತ್ತವರಿಗೆ ಸಾಕಿದವರಿಗೆ ಒಂದು ಅಗ್ನಿಪರೀಕ್ಷೆಯೇ ಸರಿ. ಅದು ಇಲ್ಲಿ ತುಂಬಾ ಸರಳೀಕರಿಸಲ್ಪಟ್ಟಿದೆ. ವೈವಾಹಿಕ ಜೀವನದ ಇತರ ಘರ್ಷಣೆಗಳು (ಪ್ರಸಾದನ ಪ್ರವೇಶವನ್ನು ಹೊರತುಪಡಿಸಿ) ಉದಾಸೀನ ಮಾಡಲ್ಪಟ್ಟಿವೆ. ಬಡತನ, ಅಧ್ಯಾಪನ ವೃತ್ತಿಯ ಮಾನಸಿಕ ಸಮಸ್ಯೆಗಳೂ ಅಷ್ಟೇ. ಹೀಗಾಗಿ ಅನೇಕ ಪಾತ್ರಗಳ (ಉದಾ : ಮಾಧವ) ಬೆಳವಣಿಗೆಗೆ ಇಲ್ಲಿ ಅವಕಾಶವಿಲ್ಲ.

ಒಂದು ಸಂವತ್ಸರ ಚಕ್ರ
ಲೇ :ಹೆಚ್. ಎಸ್. ಪಾರ್ವತಿ
ಪ್ರಕಾಶಕರು - ಇಳಾ ಮುದ್ರಣಾಲಯ, ಚಾಮರಾಜಪೇಟೆ, ಬೆಂಗಳೂರು - 18.

"ನಮ್ಮ ದೇಶದಲ್ಲಿ ಸ್ತ್ರೀಯ ಸ್ಥಿತಿ-ಗತಿ ಸುಧಾರಿಸಲಿ. ಮಹಿಳೆಗೆ ಹೆಚ್ಚು ಸ್ವಾತಂತ್ರ ಲಭಿಸಲಿ. ಆ ಸ್ವಾತಂತ್ರವನ್ನು ಉಪಯೋಗಿಸಿಕೊಂಡು ಅವಳು ತಾನು ಇಷ್ಟಪಟ್ಟ ಕ್ಷೇತ್ರದಲ್ಲಿ ಮುಂದೆ ಬರಲಿ. ಇದಕ್ಕೆ ನಾನೇನಾದರೂ ನೆರವಾಗಬಲ್ಲೆನೆಂದಾದರೆ ಅದರಷ್ಟು ಸಂತಸ ನನಗೆ ಬೇರೊಂದಿಲ್ಲ"

*ಭಾರತದ ಮೊಟ್ಟ ಮೊದಲ ಹೈಕೋರ್ಟ್ ನ್ಯಾಯಾಧೀಶೆ*
*ಶ್ರೀಮತಿ ಲೀಲಾಸೇಟ್*

## ನ್ಯಾಯಾಲಯ

# ಕರ್ನಾಟಕದಲ್ಲಿ ಜಾರಿಗೆ ತರಬೇಕಾಗಿರುವ ಜನನ ಪೂರ್ವ ರೋಗ ನಿರ್ಣಯ ಕಾಯಿದೆ

ಲಿಂಗ ಪರೀಕ್ಷೆ ಮಾಡಿ ಹೆಣ್ಣು ಭ್ರೂಣ ಹತ್ಯೆಗೆ ದಾರಿ ಮಾಡಿಕೊಡುವ ಜನನ ಪೂರ್ವ ರೋಗ ನಿರ್ಣಯ ತಂತ್ರಜ್ಞಾನಗಳ (Techniques) ಬಳಕೆಯನ್ನು ನಿಯಂತ್ರಿಸುವ ಕಾಯಿದೆ ಕೇಂದ್ರದಲ್ಲಿ ಜಾರಿಗೆ ಬಂದು ಒಂದು ವರ್ಷದ ಮೇಲಾದರು ಕರ್ನಾಟಕದಲ್ಲಿನ್ನು ಜಾರಿಗೆ ಬಂದಿಲ್ಲ. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ಅಧಿಕಾರಿಗಳು ಇದಕ್ಕೆ ನೀಡುವ ಕಾರಣ, ಸಂಬಂಧಪಟ್ಟ ಅಧಿಕಾರಿಗಳು ತಮ್ಮ ನಿತ್ಯದ ಕೆಲಸಗಳಲ್ಲಿ ಮಗ್ನರಾಗಿರುವುದರಿಂದ ಜನಟಿಕ್ ಕೌನ್ಸಿಲಿಂಗ್ ಸೆಂಟರ್ಸ್ ಅಥವಾ ಪ್ರಯೋಗಾಲಯಗಳ ಕಾರ್ಯಗಳ ಬಗ್ಗೆ ನೀತಿ ನಿಯಮಗಳನ್ನು ಹೇಳುವ ಕಾಯಿದೆ ಬಗ್ಗೆ ಚಿಂತಿಸಲು ಸಾಧ್ಯವಾಗಿಲ್ಲ. ಅಧಿಕಾರಿಗಳ ಪ್ರಕಾರ ಪಲ್ಸ್ ಪೋಲಿಯೋ ಕಾರ್ಯಕ್ರಮ ಮತ್ತು ಶಾಲಾ ಮಕ್ಕಳ ವಾರ್ಷಿಕ ಆರೋಗ್ಯ ತಪಾಸಣ ಕಾರ್ಯಕ್ರಮಗಳು ಈ ಕಾಯಿದೆಯನ್ನು ಜಾರಿಗೆ ತರಲು ದೊಡ್ಡ ಅಡ್ಡಿಯಾಗಿವೆ.

ಜನನ ಪೂರ್ವ ರೋಗ ನಿರ್ಣಯ ತಂತ್ರಜ್ಞಾನ ದುರುಪಯೋಗದ ನಿಯಂತ್ರಣ ಮತ್ತು ಪ್ರತಿಬಂಧಕ್ಕೆ ಕಾಯಿದೆ 1994-1996 ಜನವರಿ 1ರಂದು ಜಾರಿಗೆ ಬಂತು. ಈ ಕಾಯಿದೆಯು ಜನಟಿಕ್ ಕೌನ್ಸಿಲ್ ಸೆಂಟರ್‌ನಂತಹ ಸಂಸ್ಥೆಗಳ ನೊಂದಾವಣೆಗೆ ಅನುಮತಿ ನೀಡುವ, ಅಥವಾ ರದ್ದು ಪಡಿಸುವ ಅವಕಾಶ ಮಾಡಿಕೊಡುತ್ತದೆ. ಕಾಯಿದೆಯು ಜಾರಿಗೆ ಬಂದು ಆರು ತಿಂಗಳೊಳಗೆ ಈ ಸಂಸ್ಥೆಗಳು ನೊಂದಾವಣೆಗೆ ಅರ್ಜಿ ಹಾಕಿಕೊಳ್ಳಬೇಕು ಇಲ್ಲದಿದ್ದರೆ ಅವರು ನಡೆಸುವ ಜನನ ಪೂರ್ವ ರೋಗ ನಿರ್ಣಯ ತಂತ್ರಜ್ಞಾನಗಳನ್ನು ತಡೆ ಹಿಡಿಯಲಾಗುವುದೆಂದು ಕಾಯಿದೆ ಹೇಳುತ್ತದೆ.

ಅಧಿಕಾರಿಗಳ ಪ್ರಕಾರ ಇದುವರೆಗೆ ನೊಂದಾವಣೆಗೆ ಬಂದಿರುವ 11 ಅರ್ಜಿಗಳನ್ನು "ಅರ್ಹ ಏಕವ್ಯಕ್ತಿ"ಗೆ ಸಲ್ಲಿಸಲಾಗಿದೆ. ಆದರೆ "Appropriate Authority"ಯ ಅಧಿಕಾರಿ ಡಾ. G. V. ನಾಗರಾಜ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ನಿರ್ದೇಶನಾಲಯದ ಹೆಚ್ಚುವರಿ ನಿರ್ದೇಶಕರು ಇತರ ಕೆಲಸಗಳಲ್ಲಿ ಬ್ಯುಸಿ ಆಗಿರುವುದರಿಂದ ಕಾಯಿದೆ ಬಗ್ಗೆ ಗಮನ ನೀಡಲಾಗಿಲ್ಲ.

"ಅರ್ಹ ಏಕವ್ಯಕ್ತಿಗೆ ಸಹಾಯ ಮಾಡಲು ಸಲಹಾ ಸಮಿತಿಯನ್ನು ರಚಿಸಲಾಗಿಲ್ಲ. ಸೆಂಟ್ ಜೋಸೆಫ್ ಆಸ್ಪತ್ರೆಯ ಅನಾಟಮಿ ಮತ್ತು ಜನಟಿಕ್ಸ್ ಇಲಾಖೆಯ ಮುಖ್ಯಸ್ಥರಾದ ಡಾ. ಮನೋರಮ ಥಾಮಸ್ ಅವರನ್ನ ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿರುವುದನ್ನು ಬಿಟ್ಟರೆ ಉಳಿದ ಸದಸ್ಯರನ್ನು ಇನ್ನು ನೇಮಿಸಿಲ್ಲ.

ಸರ್ಕಾರವು ಈ ವಿಷಯದ ಬಗ್ಗೆ ನಿರ್ಲಕ್ಷ್ಯ ತೋರಿಸುತ್ತಿರುವುದನ್ನು ನೋಡಿದರೆ, ಈ ಕಾಯಿದೆಯಲ್ಲೇ ಕೆಲವು ಅನುಮಾನಸ್ಪದ ಅಂಶಗಳಿರಬಹುದೆಂದು ವೈದ್ಯರುಗಳ ಗುಮಾನಿ. ಅವುಗಳಲ್ಲಿ ಜನನ ಪೂರ್ವ ರೋಗ ನಿರ್ಣಯ ತಂತ್ರಜ್ಞಾನವಾಗಿ ಅಲ್ಟ್ರಾ-ಸೋನೋಗ್ರಫಿಯನ್ನು ಬ್ರಾಕೆಟ್‌ನಲ್ಲಿಟ್ಟಿರುವುದು ಅಥವಾ ಪ್ರಸೂತಿ ವೈದ್ಯರುಗಳನ್ನು ಕಾಯಿದೆ ಒಳಗೆ ಸೇರಿಸಿರುವುದು ಮುಂತಾದವು ಸೇರಿವೆ.

ಡಾ. ಥಾಮಸ್ ಅವರ ಪ್ರಕಾರ ಪ್ರತಿಯೊಬ್ಬ ಪ್ರಸೂತಿ ವೈದ್ಯರು ಒಂದಲ್ಲಾ ಒಂದು ರೀತಿಯಲ್ಲಿ ಜನಟಿಕ್ ಕೌನ್ಸಿಲ್‌ಗಳನ್ನು ಮಾಡುತ್ತಾರೆ. ಆದರೆ ಡಾ. ರಾಮಮೂರ್ತಿ ಹೇಳುತ್ತಾರೆ "ಎಲ್ಲಾ ಗರ್ಭಿಣಿ ಮಹಿಳೆಯರಿಗೆ ಮಾಡುವ ಸೋನೋಗ್ರಫಿಯಂತೆಯೇ ಬೇರೆ ವಿಧಾನಗಳು, ಉದಾಹರಣೆಗೆ ಆಮ್ನಿಯೋಟಿಕ್ ಫ್ಲೂಯಿಡ್‌ನ ಸ್ಯಾಂಪಲ್ ತೆಗೆದುಕೊಳ್ಳುವುದು ಅಥವಾ ಅಲ್ಟ್ರಾ ಸೌಂಡ್ ವಿಧಾನಗಳೂ ಕೂಡ ಜನನ ಪೂರ್ವ ರೋಗ ನಿರ್ಣಯ ಪರೀಕ್ಷಾ ವಿಧಾನಗಳು ಆಗುತ್ತವೆಯೋ ಇಲ್ಲವೋ ಎಂದು ಕಾಯಿದೆ ನಿಖರವಾಗಿ ಹೇಳುವುದಿಲ್ಲ".

**ಜನನ ಪೂರ್ವ ರೋಗ ನಿರ್ಣಯ ಪರೀಕ್ಷೆ ಏಕೆ ಮಾಡಲಾಗುತ್ತದೆ?**

ಕಾಯಿದೆಯು ಕೆಲವು ಅಪಸಾಮಾನ್ಯ ಸ್ಥಿತಿಗಳನ್ನು ಪರೀಕ್ಷಿಸಲು ಮಾತ್ರ ಜನನ ಪೂರ್ವ ರೋಗ ನಿರ್ಣಯ ಪರೀಕ್ಷೆ ಮಾಡಬೇಕೆಂದು ಹೇಳುತ್ತದೆ.

ಉದಾಹರಣೆಗೆ

- ಅನುವಂಶಿಕ ಕಾಯಿಲೆಗಳಿದ್ದಾಗ
- ಕ್ರೋಮೋಸೋಮಲ್
- ಹೀಮೋಗ್ಲೋಬಿನೊ ಪಾಥೀಸ್ (ತಲಾಸೀಮಿಯ) ಇದ್ದಾಗ
- ಗರ್ಭಿಣಿಯ ವಯಸ್ಸು 35 ವರ್ಷಗಳಿಗಿಂತ ಹೆಚ್ಚಾಗಿದ್ದರೆ
- ಗರ್ಭಿಣಿಯು ಹಿಂದೆ ಎರಡಕ್ಕಿಂತ ಹೆಚ್ಚು ಬಾರಿ ಗರ್ಭಪಾತಕ್ಕೆ ಒಳಗಾಗಿದ್ದರೆ
- ಗರ್ಭಿಣಿಯು ಮಾದಕ ವಸ್ತುಗಳು, ರೇಡಿಯೇಶನ್, ಇನ್‌ಫೆಕ್ಷನ್ ಅಥವಾ ರಾಸಾಯನಿಕ ಔಷಧಿಗಳ ಬಳಕೆಯಿಂದ ತೊಂದರೆಗೆ ಒಳಪಟ್ಟಿದ್ದರೆ
- ಗರ್ಭಿಣಿಯು ಮಾನಸಿಕ ಅಸ್ವಸ್ಥತೆ ಅಥವಾ ಅಂಗವಿಕಲತೆಯಿರುವ ಕುಟುಂಬದಿಂದ ಬಂದಿದ್ದರೆ.

- ಟೈಮ್ಸ್ ಆಫ್ ಇಂಡಿಯ

# ಓದುಗರ ವಿಭಾಗ

ಜನವರಿ 1997ರ ಮಾನಸ ಸಂಚಿಕೆಯ ವೆಂ. ವನಜಾರವರು ಬರೆದಿರುವ "ವೇಶ್ಯಾವೃತ್ತಿಗೆ ಸಂಪ್ರದಾಯದ ಪರವಾನಗಿ" ಎಂಬ ಲೇಖನ ಮಹಿಳೆಯರು ಬದುಕುತ್ತಿರುವ ಹೀನ ಸ್ಥಿತಿಯ ಮೇಲೆ ಬೆಳಕ ಚೆಲ್ಲುತ್ತದೆ.

ಈ ವೇಶ್ಯಾವೃತ್ತಿಗೆ ಕಾರಣಗಳು ಯಾವುವು ಎಂಬುದನ್ನು ವೆಂ. ವನಜರವರು ಜನವರಿ 97 ಮಾನಸ ಸಂಚಿಕೆಯಲ್ಲಿ 'ವೇಶ್ಯಾವೃತ್ತಿಗೆ ಸಂಪ್ರದಾಯದ ಪರವಾನಗಿ' ಲೇಖನದಲ್ಲಿ ತಿಳಿಸಿದ್ದಾರೆ. ಸ್ತ್ರೀಯರ ಕುಟುಂಬದಲ್ಲಿರುವ ಆರ್ಥಿಕ ಬಿಕ್ಕಟ್ಟು, ಮಹಿಳೆಯರು ಮದುವೆಯಾದಂತಹ ಪುರುಷರು ಸೋಮಾರಿಗಳು, ಅಸಮರ್ಥರು ಆಗಿರುವುದು ಮತ್ತು ಸಂಪ್ರದಾಯಿಕವಾಗಿ ದೇವರುಗಳ ಹೆಸರಿನಲ್ಲಿ ನಡೆಸುವ ಸಂಪ್ರದಾಯಗಳು, ಜನಾಂಗದ ಹೆಸರಿನಲ್ಲಿ ನಡೆಸುವ ವೃತ್ತಿ ಇತ್ಯಾದಿಗಳನ್ನು ತಿಳಿಯಪಡಿಸಿದ್ದಾರೆ.

ಮಹಿಳೆಯರು ಇಂತಹ ಹೀನವೃತ್ತಿಗೆ ಸೇರಲು ಅನೇಕ ಸಾಮಾಜಿಕ ಒತ್ತಡಗಳು, ಆರ್ಥಿಕ ಹಾಗೂ ಸಾಂಸಾರಿಕ ಸಮಸ್ಯೆಗಳು ಆಗಿವೆ. ಮಹಿಳೆಯರಿಗೆ ವೇಶ್ಯಾವೃತ್ತಿಯೊಂದು ಕಳಂಕದ ವಿಷಯವಾಗಿದೆ. ಈ ವೃತ್ತಿ ಮಹಿಳೆಯರು ತಮ್ಮ ಇಚ್ಛೆಯಿಂದ ಸೇರುವುದಿಲ್ಲ, ಬದಲಿಗೆ ಸಮಾಜದಲ್ಲಿನ ಎಲ್ಲ ಸ್ತ್ರೀ ಪುರುಷರು ಕಾರಣರಾಗುತ್ತಾರೆ. ಈ ವೃತ್ತಿಯ ಹಿಂದೆ ಬಲತ್ಕಾರವಿರುತ್ತದೆ ಮತ್ತು ಸಮಸ್ಯೆಗಳಿರುತ್ತವೆ. ಈಗಿನ ಪ್ರಜ್ಞಾವಂತ ಸ್ತ್ರೀ ಪುರುಷರು ಈ ವೃತ್ತಿಯನ್ನು ವಿರೋಧಿಸಿ ಅದನ್ನು ನಿರ್ಮೂಲನ ಮಾಡುವುದರ ಮೂಲಕ ಸ್ತ್ರೀಯರ ಗೌರವಕ್ಕೆ ಒದಗುವ ದಕ್ಕೆಯನ್ನು ತಡೆಯಬಹುದಾಗಿದೆ.

ಹೆಣ್ಣು ಮಕ್ಕಳಿಗೆ ಒಳ್ಳೆಯ ವಿದ್ಯಾಭ್ಯಾಸವನ್ನು ನೀಡಿದರೆ ಅವರು ತಮ್ಮ ಉಜ್ವಲ ಜೀವನವನ್ನು ಪ್ರಾರಂಭಿಸಬಹುದು. ಅವರಿಗೆ ಒಳ್ಳೆಯ ಜೀವನವನ್ನು ಪ್ರಾರಂಭಿಸಲು ಪ್ರೋತ್ಸಾಹ ನೀಡಬೇಕಾದುದು ಬಹಳ ಅವಶ್ಯಕ. 'ಇಂತಹ ವೃತ್ತಿಯನ್ನು ಬುಡಸಮೇತವಾಗಿ ಕಿತ್ತು ಹಾಕಬೇಕು'.

ಭಯದ ಮೂಲ ನಮ್ಮ ಮನಸ್ಸು. ನಾವು ಚಿಕ್ಕಂದಿನಲ್ಲಿರುವಾಗ 'ಭಯ' ಎಂಬ ಶಬ್ದವೇ ನಮಗೆ ಗೊತ್ತಿರುವುದಿಲ್ಲ. ನಮ್ಮದೇ ಆದ ಸ್ವಂತ ಲೋಕ, ನಾವು ಬಯಸಿದ್ದನ್ನು ತಲುಪುವ ಲೋಕ. ನಾವು ಇಷ್ಟ ಬಂದವರೊಡನೆ ಆಡುವ ಲೋಕ ಆಡಿ ನಲಿಯುವ ಲೋಕ. ಆದರೆ ಹೆಣ್ಣು ಮಕ್ಕಳಿಗೆ ಈ ಲೋಕ ಬಹುಕಾಲ ಇರುವುದಿಲ್ಲ.

ನಾವು ಬೆಳೆದಂತೆ ನಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತೇವೆ. ಇದು ಹೆಣ್ಣು ಮಕ್ಕಳಿಗೆ ಯಾಕೆ? ಗಂಡು ಮಕ್ಕಳಿಗ್ಯಾಕಿಲ್ಲ. ಹೆಣ್ಣು ಮಗುವಾಗಿ ಹುಟ್ಟಿದ ಮೇಲೆ ಅನುಭವಿಸಲೇಬೇಕೆ? ವಯಸ್ಸು ಹೆಚ್ಚಾದಂತೆ ದೇಹದಲ್ಲಿ ಬದಲಾವಣೆ ಕಂಡುಬರುತ್ತೆ. ಸಹಜವಾಗಿ ಹೆಣ್ಣು ಮಕ್ಕಳು ಋತುಮತಿಯಾದ ಮೇಲೆ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳುತ್ತಾರೆ. ಅವರಲ್ಲಿ ಹೆಂಗಸು ಗಂಡಸು ಎಂಬ ಭೇದಭಾವ ಉಂಟಾಗುತ್ತದೆ, ಪುರುಷರ ದೃಷ್ಟಿ ಅವರ ಮೇಲೆ ಹಿಂದಿನಂತಿರುವುದಿಲ್ಲ.

ಸರಸ್ವತಿ ದು. ರವರು ಬರೆದಿರುವ 'ಭಯ' ಎಂಬ ಲೇಖನದಲ್ಲಿ ಮುಚ್ಚುಮರೆಯಿಲ್ಲದೆ ಸ್ಪಷ್ಟವಾಗಿ ಈ ಅಂಶವನ್ನು ವ್ಯಕ್ತಪಡಿಸಿದ್ದಾರೆ. ಋತುಮತಿಯಾದ ಹೆಣ್ಣು ಸಮಾಜದಲ್ಲಿ ಎಂತಹ ತೊಂದರೆಗಳಿಗೆ ಒಳಗಾಗುತ್ತಾಳೆಂದು ಚೆನ್ನಾಗಿ ವ್ಯಕ್ತಪಡಿಸಿದ್ದಾರೆ. ಮನೆಯಲ್ಲಿ ಹಿರಿಯರು ಇಂತಹ ಸಾಮಾಜಿಕ ಸಮಸ್ಯೆಗಳನ್ನು ಹೇಗೆ ಎದುರಿಸಬೇಕೆಂಬ ತಿಳುವಳಿಕೆ ನೀಡಬೇಕು. ಅದನ್ನು ಬಿಟ್ಟು ಅವಳನ್ನು ಎಲ್ಲಿಯೂ ಹೊರಗೆ ಬಿಡದೆ ಸ್ವಾತಂತ್ರ್ಯಹೀನಳನ್ನಾಗಿ ಮಾಡಬಾರದು. ಅವಳಲ್ಲಿ ಶಕ್ತಿ, ಧೈರ್ಯ, ಸಾಹಸಗಳನ್ನು ತುಂಬಬೇಕು. ಅವಳನ್ನು ಸಮಾಜದಲ್ಲಿ ಒಬ್ಬ ಶಕ್ತಿಯುತ ಮಹಿಳೆಯನ್ನಾಗಿ ಮಾಡಬೇಕು.

ಹೆಣ್ಣು ತಾನು ಚಿಕ್ಕ ಹುಡುಗಿಯಾಗಿದ್ದಾಗ ಸ್ವತಂತ್ರಳಾಗಿ ಒಂದು ಸ್ವತಂತ್ರ ಪಕ್ಷಿಯಂತೆ ಮುಗ್ಧತೆಯ ಜೀವನ ನಡೆಸುತ್ತಾಳೆ, ಕಾಲ ಕಳೆದಂತೆ ಅವಳಲ್ಲಿ ಆಗುವ ದೈಹಿಕ ಬದಲಾವಣೆಯನ್ನು ಹೊಂದಿ ಸಮಾಜದಲ್ಲಿ ಭೀತಿಯಿಂದ ಜೀವನ ನಡೆಸುತ್ತಾಳೆ. ಹೆಣ್ಣಿನ ದೈಹಿಕ ಬದಲಾವಣೆಯನ್ನು ಕಂಡು ಸಮಾಜದಲ್ಲಿನ ಎಲ್ಲ ಪುರುಷರು ಅವಳೊಂದಿಗೆ ಅಸಭ್ಯತೆಯಿಂದ ನಡೆದುಕೊಳ್ಳುತ್ತಾರೆ. ಇದರಿಂದ ಹೆಣ್ಣು ಇನ್ನು ಅಧಿಕ ಭಯಕ್ಕೆ ಒಳಗಾಗುತ್ತಾಳೆ. ಆದುದರಿಂದ ಸಮಾಜದಲ್ಲಿನ ಎಲ್ಲ ಸ್ತ್ರೀ ಪುರುಷರು ಇಂತಹ ಸ್ತ್ರೀ ಶೋಷಣೆಯ ಸಮಸ್ಯೆಗಳನ್ನು ನಿರ್ಮೂಲನ ಮಾಡಬೇಕು. ಇಲ್ಲವಾದರೇ ಆಕೆ ತನ್ನ ಜೀವನ ಪರ್ಯಂತವಾಗಿ ಭಯದ ಬದುಕು ನಡೆಸುತ್ತಾಳೆ, ಜೊತೆಗೆ ಅವಳಲ್ಲಿ ಹೆಚ್ಚಿನ ಆತ್ಮವಿಶ್ವಾಸ ಉಂಟಾಗುವಂತೆ ಮಾಡಬೇಕು.

**ಎಸ್. ಎಂ. ತೇಜಸ್ವಿನಿ ಹಾಗು ಕೆ. ಎ. ಲಕ್ಷ್ಮಿ, ಕಾಡುಗುಡಿ, ಬೆಂಗಳೂರು - 67**



ವಂದನೆಗಳು, ಬಹಳ ದಿನಗಳಿಂದ 'ಮಾನಸ' ತಿಂಗಳ ಪತ್ರಿಕೆ ವಿಷಯವಾಗಿ ಕೇಳುತ್ತಿದ್ದೆ. ಮೊನ್ನೆ ಪ್ರತಿಭಟನೆಗಾಗಿ ಬೆಂಗಳೂರಿಗೆ ಬಂದಾಗ ಲಂಕೇಶ್ ಪತ್ರಿಕೆ ಆಫೀಸಿನಲ್ಲಿ ಕುಳಿತಿದ್ದಾಗ ಗೆಳೆಯರು ಮಾನಸ ಬಗ್ಗೆ ಮೆಚ್ಚುಗೆ ವ್ಯಕ್ತ ಪಡಿಸಿದರು.

ಕುತೂಹಲಕ್ಕಾಗಿ, ಒಂದೆರಡು ಸಂಚಿಕೆ ತೆಗೆದು ಅಲ್ಲೆ ಓದಿದೆ. ಖುಷಿಯಾಯ್ತು. ಈಗಾಗಲೇ ಸಂಪುಟ - 11 ಸಂಚಿಕೆ - 12 ಹೊರ ತಂದಿದ್ದು ನೋಡಿ ಸೋಜಿಗ ಮತ್ತು ನಾಚಿಕೆ ಎರಡು ಆಯ್ತು. ಕಾರಣ ಈ ಪತ್ರಿಕೆಯನ್ನು Regular ಆಗಿ Read ಮಾಡಲಿಲ್ಲವೆಂದು.

ಹೆಣ್ಣಿನ ಮೇಲೆ ರಾಜಕೀಯವಾಗಿ, ಸಾಂಸ್ಕೃತಿಕವಾಗಿ, ಆರ್ಥಿಕವಾಗಿ, ಸಾಮಾಜಿಕವಾಗಿ - ಈ ಎಲ್ಲಾ ನೆಲಗಟ್ಟಿನ ಆಳದಲ್ಲಿ ಕ್ರೌರ್ಯದ ವಿರುದ್ಧ ದನಿಯಾಗಿ ಮಾನಸ ನಮ್ಮ ಮನಸ್ಸಿನ ಆಳದಲ್ಲಿ ಕಲಕುತ್ತದೆ. ಈ ಕಾರ್ಯ ಹೀಗೆ ಮುಂದುವರೆಯಲಿ. ನಿಮ್ಮ ಈ ಕಾರ್ಯಕ್ಕೆ ಯಶಸ್ಸಿ ಹಾರೈಸುವ

**ಟಿ. ಎಸ್. ರಂಗೇಗೌಡ, ಎಂ.ಎ., ಮಾವಿನಕೆರೆ ಗ್ರಾಮ, ಭದ್ರಾವತಿ**

# ಕೊಜೆಂಟ್ರಿಕ್ಸ್ ಖಂಡಿತಾ ಬೇಡವೆ ಬೇಡ, ಬೇಕಾದರೆ ದೇವೇಗೌಡರ ಊರಲ್ಲಿ ಹಾಕಲಿ

ಹಾಂಗ್‌ಕಾಂಗ್‌ನ ಚೈನಾ ಲೈಟ್ ಅಂಡ್ ಪವರ್ ಕಂಪನಿ ಮತ್ತು ಅಮೆರಿಕೆಯ ಕೊಜೆಂಟ್ರಿಕ್ಸ್ ಕಂಪನಿಯು ಒಟ್ಟಾಗಿ ಮಂಗಳೂರು ಪವರ್ ಕಂಪನಿಯೆಂಬ ಹೆಸರಿನಲ್ಲಿ ದಕ್ಷಿಣ ಕನ್ನಡದ ಪಡುಬಿದ್ರಿ ಸಮೀಪದ ನಂದಿಕೂರು ಗ್ರಾಮದಲ್ಲಿ ಕಲ್ಲಿದ್ದಲನ್ನು ಬಳಸಿ 1,000 ಮೆಗಾವಾಟ್ ವಿದ್ಯುತ್ ಶಕ್ತಿಯ ಒಂದು ಉಷ್ಣ ವಿದ್ಯುತ್ ಸ್ಥಾವರವನ್ನು ಸ್ಥಾಪಿಸುವ ಯೋಜನೆಗೆ ಕೇಂದ್ರ ಹಾಗು ರಾಜ್ಯ ಸರ್ಕಾರಗಳ ಅನುಮತಿ ಸಿಕ್ಕಿದೆ. ಈ ಕಂಪನಿಗೆ ಹಣ ಸಂದಾಯದ ಬಗ್ಗೆ ಕೇಂದ್ರ ಸರ್ಕಾರವು ಧೃಡೀಕರಣವನ್ನು ನೀಡಿದೆ. ಯೋಜನೆಯನ್ನು ಪ್ರಾರಂಭಿಸಲು ಜಮೀನನ್ನು ವಶಪಡಿಸಿಕೊಳ್ಳುವ ಕಾರ್ಯಕ್ರಮಗಳು ಪ್ರಾರಂಭವಾಗಿವೆ.

ಸಮುದ್ರ ತೀರದ ಪರಿಸರ ಸಂರಕ್ಷಣೆಯ ಕುರಿತು ವಿಧಿಸಿರುವ ನಿಯಮಗಳನ್ನು ಸ್ಥಾವರವು ಉಲ್ಲಂಘಿಸುತ್ತದೆ ಎಂದು ಆಕ್ಷೇಪಿಸಿ ಮನೇಕಾ ಗಾಂಧಿಯವರು ಸುಪ್ರೀಂ ಕೋರ್ಟಿಗೆ ಹೋದರು. ಆ ಬಗ್ಗೆ ತಜ್ಞ ವರದಿ ಸಲ್ಲಿಸಲು ನಾಗಪುರದ ರಾಷ್ಟ್ರೀಯ ಪರಿಸರ ಇಂಜಿನಿಯರಿಂಗ್ ಸಂಶೋಧನಾ ಸಂಸ್ಥೆಯನ್ನು ಸುಪ್ರೀಂ ಕೋರ್ಟ್ ಕೇಳಿತು. ವರದಿಯು ಉಲ್ಲಂಘನೆಗಳ ಸರಮಾಲೆಯನ್ನೆ ನೀಡಿದೆ. ವರದಿಯು - ಕಲ್ಲಿದ್ದಲಿನ ಸಾಗಾಟ, ದಾಸ್ತಾನು ಮತ್ತು ನಿರ್ವಹಣೆ, ಕಾರಿರುವ ಅನಿಲಗಳಿಂದ ಸುತ್ತಮುತ್ತಲ ವಾಯುವಿನ ಮೇಲಾಗುವ ಪರಿಣಾಮ, ಹಾರುಬೂದಿಯ ಬಳಕೆ ಮತ್ತು ವಿಸರ್ಜನೆ, ಸಂತ್ರಸ್ತರ ಪುನರ್ವಸತಿ ವ್ಯವಸ್ಥೆ ಈ ಎಲ್ಲಾ ವಿಷಯಗಳ ಬಗ್ಗೆ ತೃಪ್ತಿಕರವಾದ ವ್ಯವಸ್ಥೆಯಾಗಿಲ್ಲವೆಂದು ತಿಳಿಸುತ್ತದೆ. ಅಲ್ಲದೆ ಸಮುದ್ರದ ಮತ್ಸ್ಯ ಸಂಪತ್ತಿಗೂ, ಅದಕ್ಕೆ ಸಂಬಂಧಪಟ್ಟ ಜನ ಜೀವನಕ್ಕೂ ಮಾರಕವಾದೀತು ಎಂದು ವರದಿ ತಿಳಿಸಿದೆ.

ತಮ್ಮದು ಅತ್ಯಾಧುನಿಕ ತಂತ್ರಗಾರಿಕೆ. ಇದರಿಂದ ಪರಿಸರಕ್ಕೆ ಯಾವುದೇ ಅಪಾಯವಿಲ್ಲವೆಂದು ಹೇಳಿಕೊಂಡ ಕೊಜೆಂಟ್ರಿಕ್ಸ್‌ನ ಮುಖ್ಯಸ್ಥರು ಈಗೇನು ಉತ್ತರ ಹೇಳುತ್ತಾರೆ? ಯಾವುದನ್ನೂ ಕೂಲಂಕೂಷವಾಗಿ ಪರೀಕ್ಷಿಸದೆ ಅನುಮತಿ ನೀಡುವ ನಮ್ಮ ಘನ ಸರ್ಕಾರಗಳಿಗೆ ಜನರ ಕಾಳಜಿ ಇದೆಯೇ? ಬೇಜವಾಬ್ದಾರಿ ಸರ್ಕಾರಕ್ಕೆ ಜನರೇ ಎಚ್ಚೆತ್ತು ಬುದ್ದಿ ಕಲಿಸಬೇಕು. ಬುದ್ದಿ ಕಲಿಸುವ ಕಾರ್ಯವನ್ನು ಈಗಾಗಲೆ ಜನರು ಪ್ರಾರಂಭಿಸಿದ್ದಾರೆ. ಆ ನಿಟ್ಟಿನಲ್ಲಿ ಮಹಿಳೆಯರೂ ಜೊತೆಯಾಗಿ ದುಡಿಯುತ್ತಿದ್ದಾರೆ.

ಬೆಳ್ತಂಗಡಿ ತಾಲ್ಲೂಕು ಮಹಿಳಾ ಜಾಗೃತಿ ವೇದಿಕೆಯ ಕಾರ್ಯಕರ್ತೆಯರು, ಅದೇ ತಾಲೂಕಿನ ಪರಿಸರಾಸಕ್ತ ಒಕ್ಕೂಟದವರೊಂದಿಗೆ ಪ್ರಚಾರ ಕಾರ್ಯಕ್ರಮವನ್ನು ಕಳೆದ ಡಿಸೆಂಬರ್‌ನಲ್ಲಿ ಏರ್ಪಡಿಸಿದ್ದರು. ಡಿಸೆಂಬರ್ 11 ಮತ್ತು 12ರಂದು ಕೊಜೆಂಟ್ರಿಕ್ಸ್ ಸ್ಥಾಪನೆಯಾಗಲಿರುವ ಗ್ರಾಮಗಳಿಗೆ ಭೇಟಿ ನೀಡಿ ಸುಮಾರು 700 ಮನೆಗಳಿಗೆ ಹೋಗಿ ಕಾರ್ಯಕರ್ತೆಯರು ಕೊಜೆಂಟ್ರಿಕ್ಸ್‌ನಿಂದಾಗುವ ಅನಾಹುತದ ಬಗ್ಗೆ ಪ್ರಚಾರ ಮಾಡಿದರು. 25 ಮಹಿಳೆಯರು 5 ತಂಡಗಳಲ್ಲಿ ಮನೆ ಮನೆಯನ್ನು ಸಂಪರ್ಕಿಸಿದರು. ಸ್ಥಳೀಯ ನಂದಿಕೂರು ಗ್ರಾಮದ ಜನ ಜಾಗೃತಿ ಸಮಿತಿಯವರ ಸಹಕಾರದೊಂದಿಗೆ ಕಾರ್ಯಕ್ರಮ ನಡೆಸಲಾಯಿತು. ಕೊಜೆಂಟ್ರಿಕ್ಸ್‌ನಿಂದಾಗುವ ದುಷ್ಪರಿಣಾಮಗಳು, ಪ್ರತಿಭಟನೆಯಲ್ಲಿ ಮಹಿಳೆಯರನ್ನು ಒಳಗೊಳ್ಳುವುದು - ಇಂತಹ ಉದ್ದೇಶಗಳನ್ನಿಟ್ಟುಕೊಂಡು ಈ ಸಂಪರ್ಕ ಕಾರ್ಯಕ್ರಮವನ್ನು ಏರ್ಪಡಿಸಲಾಗಿತ್ತು.

ಮನೆ-ಮನೆಗೂ ಹೋಗಿ ಭೇಟಿ ನೀಡುವುದು, ದಾರಿಯಲ್ಲಿ ಸಿಕ್ಕವರೊಂದಿಗೆ ಮಾತುಕತೆ, ಬೈಹುಲ್ಲಿನ ಕೆಲಸ ಮಾಡುತ್ತಿದ್ದಲ್ಲಿಗೇ ಹೋಗಿ ಚರ್ಚೆ ಮಾಡುವುದು - ಈ ಮೂಲಕ ಮಾಡಿದ ಜನರ ಸಂಪರ್ಕ ಅರ್ಥಪೂರ್ಣವಾಗಿತ್ತು. ಸ್ಥಳೀಯ ಜನರು ಸಕ್ರೀಯವಾಗಿ ಪಾಲ್ಗೊಂಡಿದ್ದರು. ಕೊಜೆಂಟ್ರಿಕ್ಸ್ ಬಗ್ಗೆ ಶೇ. 90ಕ್ಕಿಂತ ಹೆಚ್ಚಿನ ಮಹಿಳೆಯರಿಗೆ ಒಳ್ಳೆ ಮಾಹಿತಿ ಇರುವುದು ಈ ಕಾರ್ಯಕ್ರಮದಿಂದ ತಿಳಿಯಿತು. ಅವರದೇ ಮಾತುಗಳಲ್ಲಿ ಅವರ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದರು - ಕೆಲವು ಪ್ರತಿಕ್ರಿಯೆಗಳು:

"ಈ ಕೊಜೆಂಟ್ರಿಕ್ಸ್ ಯಾರಿಗೆ ಬೇಕು? ತುಂಬ ತುಂಬ ಹಣವಿರುವ ಜನರು ನಮ್ಮನ್ನು ಈ ಊರಿನಿಂದ ಹೊರಗೆ ಹಾಕಿ ಕೊಜೆಂಟ್ರಿಕ್ಸ್ ಹಾಕುತ್ತಿದ್ದಾರೆ ನಮ್ಮ ಪ್ರಾಣ ಹೋದರು ಜಾಗ ಬಿಟ್ಟುಕೊಡಲಾರೆವು.

ಅಪ್ಪಿ - ಬೀಡಿ ಕಟ್ಟುವ ಮಹಿಳೆ

"ಹೋರಾಟದ ಸಮಯದಲ್ಲಿ ಪೋಲಿಸರು ಗುಂಡು ಹಾಕುತ್ತಾರಲ್ಲಾ ಅವಾಗ ನಾವು ಪ್ರಾಯ ಹೋದವರು ಮುಂದೆ ನಿಂತು ಗುಂಡಿಗೆ ಬಲಿಯಾಗುತ್ತೇವೆ. ನೀವು ಹಿಂದೆ ನಿಲ್ಲಿ"

- ರಮಣಿ

"ನಾವು ಬೀಡಿ ಕಟ್ಟುವುದು, ನಮ್ಮ ಕುಟುಂಬ ನಿರ್ವಹಣೆಗಾಗಿ. ನಮಗೆ ಬೀಡಿ ಮಜೂರಿ ಹೆಚ್ಚಾಗಬೇಕು, ಬೋನಸ್ ಹೆಚ್ಚಾಗಬೇಕು ಎಂದು ಮಂಗಳೂರಿನಲ್ಲಿ ಸ್ಟ್ರೈಕ್ ಮಾಡುತ್ತಾರೆ. ಆದರೆ ನಾವಿಲ್ಲಿ ಬೀಡಿ ಸೊಪ್ಪಿನ ಮುಂದೆ ಬೆನ್ನು ಬಗ್ಗಿಸಿ ಬೀಡಿ ಕಟ್ಟುತ್ತಾ ಆದರ ಫಲ ಅನುಭವಿಸುತ್ತೇವೆ. ಆದರೆ ಈ ಹೋರಾಟ ಹಾಗಾಗಬಾರದು. ಭೂಮಿ ಕಳಕೊಳ್ಳುವ ನಾವು ಹೋರಾಟದ ಮುಂಚೂಣಿಯಲ್ಲಿದ್ದು ನೀವು ಬೆಂಬಲಿಸಬೇಕು.

*ಬೀಡಿ ಕಟ್ಟುವ ಮಹಿಳೆ.*

"ನಾವು ಬಡವರು......... ಹೋರಾಟಕ್ಕೆ ಬರುತ್ತೇವೆ. ಶ್ರೀಮಂತರು ಹೊರಗೆ ಇಳಿಯುವುದೇ ಇಲ್ಲ....."

- ಹಲವು ಮಹಿಳೆಯರ ಅಭಿಪ್ರಾಯ

"ನಾವು ಬರುತ್ತೇವೆ. ಆ ಶ್ರೀಮಂತ ಮಹಿಳೆಯರೂ ಬರಲಿ. ನಮಗೆ ಮಾತ್ರವಾ ಜಾಗ ಬೇಕಾಗಿರುವುದು. ಅವರಿಗೆ ನಮಗಿರುವುದಕ್ಕಿಂತ ಹತ್ತಿಪ್ಪತ್ತು ಪಟ್ಟು ಜಾಸ್ತಿ ಭೂಮಿ ಇದೆ. ಅವರು ಬಂದರೆ ಬರುವಾ..... ಇಲ್ಲವಾದರೆ ನಾವು ಯಾಕೆ ಸುಮ್ಮನೆ ಪೆಟ್ಟು ತಿನ್ನುವುದು"

ಈ ರೀತಿ ಪ್ರತಿಕ್ರಿಯಿಸಿದ ಮಹಿಳೆಯೊಬ್ಬಳು ಬೇರೆ ವಿವರಣೆಗೆ ಆಸ್ಪದ ನೀಡದೆ ಎಮ್ಮೆ ಮೇಯಿಸಿಕೊಂಡು ಹೊರಟು ಹೋದರು.

ಮಹಿಳೆಯರಿಬ್ಬರು ವಾದಕ್ಕಿಳಿದಿದ್ದು ಹೀಗೆ

"ಇದೆಲ್ಲ ಮಾಡುವುದು ಸುಮ್ಮನೆ. ರಾಜಕಾರಣಿಗಳು, ಮೇನಕಾಗಾಂಧಿಯಂತವರು ಬಂದು ವೇದಿಕೆಯಲ್ಲಿ ಭಾಷಣ ಮಾಡುತ್ತಾರೆ. ಅವರಿಗೆ ಪೋಲಿಸ್ ಪ್ರೊಟೆಕ್ಷನ್ ಬೇರೆ ಇದೆ. ರಾಜಕಾರಣಿಗಳು ಕೋಟಿಗಟ್ಟಲೆ ಹಣ ಮಾಡುತ್ತಾರೆ. ನಾವು ಸುಮ್ಮನೆ ಪೆಟ್ಟು ತಿನ್ನುವುದು. ಅವರು ಮಾಡುವುದು ಮಾಡೇ ತೀರುತ್ತಾರೆ.....

"ನಮಗೆ ಜಾಗ ಇದ್ದರೂ ಒಂದೆ ಇಲ್ಲದಿದ್ದರೂ ಒಂದೇ. ಈ ಕೊಂಕಣ ರೈಲ್ವೆಯಿಂದಾಗಿ ಒಂದು ಮಳೆ ಬಂದರೆ ಇಡೀ ಮನೆ ನೀರಿನಿಂದ ತುಂಬಿ ಹೋಗುತ್ತದೆ. ರಾತ್ರೋ ರಾತ್ರಿ ದನಕರುಗಳನ್ನು ಮನೆ ಸಾಮಾನನ್ನು ಹಿಡಿದುಕೊಂಡು ಹೋಗುವುದಾದರೂ ಎಲ್ಲಿಗೆ? 6 ತಿಂಗಳು ಇಲ್ಲಿ ಬಂದು ಇರಬಹುದು. ಉಳಿದ ಸಮಯಗಳಲ್ಲಿ ಬೇರೆ ನೋಡಿಕೊಳ್ಳಬೇಕು

- ಭವಾನಿ

"ನಮ್ಮನ್ನು ಇಲ್ಲಿಂದ ಹೋಗಿ ಅಂತ ಹೇಳ್ತಾರೆ. ಆದ್ರೆ ನಾವು ಎಲ್ಲಿಗೆ ಹೋಗುವುದು. ನಮಗೆ ಹೇಗೆ ಮನಸ್ಸು ಬರಬೇಕು?" - ಒಬ್ಬ ಮುದುಕಿ.

ಅನೇಕರು ಈ ರೀತಿ ಪ್ರತಿಕ್ರಿಯಿಸಿದರು - "ನೋಡಿ ನಮ್ಮ ಊರಲ್ಲಿ 5 ಫೀಟಿನೊಳಗೆ ನೀರು ಸಿಗುತ್ತದೆ. ಯಾಕೆ ಇದನ್ನು ಬಿಡಬೇಕು?"

"ಅವರು ದೊಡ್ಡ ಕಂಪನಿಯವರು ನಮ್ಮ ಊರಿಗೆ ಬಂದು ಚಾಪೆ ಹಾಸಲು ನಾವು ಖಂಡಿತ ಬಿಡುವುದಿಲ್ಲ'

"ಈ ಕೋಜೆಂಟ್ರಿಕ್ಸ್ ಖಂಡಿತಾ ಬೇಡವೇ ಬೇಡ. ದೇವೇಗೌಡರ ಊರಲ್ಲಿ ಹಾಕಲಿ"

"ಇಂತಹ ಮನೆ, ಇಂತಹ ಜಮೀನನ್ನು ನಾವು ಈ ಜನ್ಮದಲ್ಲಿಯೇ ಮಾಡುವುದಕ್ಕಿಲ್ಲ"

ಕಾರ್ಯಕರ್ತೆಯರನ್ನು ಕೊಜೆಂಟ್ರಿಕ್ಸ್ ಕಡೆಯವರೆಂದು ಕೊಂಡು ಕೆಲವು ಮಹಿಳೆಯರು ಈ ರೀತಿ ಕೋಪ ವ್ಯಕ್ತಪಡಿಸಿದರು - "ಕೋಜೆಂಟ್ರಿಕ್ಸ್ ಆಗಬೇಕು ಅನ್ನುವವರಾದರೆ ಅಂಗಳಕ್ಕೆ ಇಳಿಯುವುದೇ ಬೇಡ"

ಒಬ್ಬ ಮಹಿಳೆಯಂತು ಹಿಡಿಸೂಡಿ ಹಿಡಿದುಕೊಂಡು ಹೊಡೆಯುವುದಕ್ಕೆ ಮುಂದಾದರು. ಕೊಜೆಂಟ್ರಿಕ್ಸ್‌ನವರಲ್ಲವೆಂದು ತಿಳಿದ ಮೇಲೆ ಸುಮ್ಮನಾದರು. ನಂತರ ಹೇಳಿದ್ದು ಹೀಗೆ - "ನೀವು 2 ಲಕ್ಷವಲ್ಲ, 10 ಲಕ್ಷ ಕೊಟ್ಟರೂ ನಾವು ಈ ಜಾಗ ಬಿಟ್ಟು ಹೋಗುವುದಿಲ್ಲ. ನಾವು ದುಡ್ಡನ್ನು ತಿನ್ನುವುದಕ್ಕಾಗುವುದಿಲ್ಲ. ಈ ಮಣ್ಣಿನಲ್ಲಿ ದುಡಿದ್ರೇನೇ ಹೊಟ್ಟೆಗೆ ತಿನ್ನಬಹುದು".

ಕೊಜೆಂಟ್ರಿಕ್ಸ್‌ನ ವಿರುದ್ಧ 1984ರಿಂದಲೇ ಹೋರಾಟ ಆರಂಭವಾಯಿತು. ಹಲವಾರು ಲಕ್ಷ ಖರ್ಚು ಮಾಡಿ ಕಟ್ಟಿದ ಎನ್.ಟಿ.ಪಿ.ಸಿ. ಜನರ ಹೋರಾಟಕ್ಕೆ ಹೆದರಿ ಕಾಲು ಕಿತ್ತಿವೆ. ಕಟ್ಟಡಗಳು ಪಾಳುಬಿದ್ದು ಹೋರಾಟದ ಸಂಕೇತವಾಗಿ ನಿಂತಿದೆ. ಇತ್ತೀಚೆಗೆ ಭೂಮಾಪನಕ್ಕೆಂದು ಕೆಲವರು ಪೋಲಿಸ್ ಬಲದೊಂದಿಗೆ ಬಂದಾಗ ಜನರು ಭೂಮಾಪನವನ್ನು ತಡೆದದ್ದು ಹೋರಾಟ ಬಲಗೊಂಡಿರುವುದರ ನಿದರ್ಶನ. 200 ಜನರನ್ನು ಎದುರಿಸಲು ಬಂದಿದ್ದ ಪೋಲಿಸರ ಸಂಖ್ಯೆ 500! ಲಾಠಿ ಚಾರ್ಜ್ ಆದಾಗ ಇಬ್ಬರು ಕಾರ್ಯಕರ್ತರನ್ನು ರಕ್ಷಿಸಿದ್ದು ಅಲ್ಲಿನ ಮಹಿಳೆಯರು, "ಜೈಲಿಗೆ ಹಾಕುವುದಾದರೆ ನಮ್ಮ ದನಕರುಗಳನ್ನು ನಮ್ಮೊಂದಿಗೆ ಜೈಲಿಗೆ ಕರೆದುಕೊಂಡು ಹೋಗಲಿ" ಎನ್ನುತ್ತಾರೆ ವನಜಮ್ಮ.

ಒಟ್ಟಿನಲ್ಲಿ ಈ ಸಂಪರ್ಕ ಕಾರ್ಯಕ್ರಮ ವಿಶೇಷವಾದದ್ದು. ಅರ್ಥಪೂರ್ಣವಾದದ್ದು ಎನ್ನುವ ಅಭಿಪ್ರಾಯ ಕಾರ್ಯಕರ್ತೆಯರದು.

*ಕೃಪೆ : ನಿಸರ್ಗ ಲೋಕ*

*ದ. ಕ. ಜಿಲ್ಲಾ ಪರಿಸರಾಸಕ್ತ ಒಕ್ಕೂಟದ ಪ್ರಕಟಣೆ.*

ಮಾನಸ ಪತ್ರಿಕೆ ಯಾವ ಸಂಸ್ಥೆಯ, ಸರ್ಕಾರದ ನೆರವಿಲ್ಲದೇ ಪ್ರಕಟವಾಗುತ್ತಿರುವ ಮಹಿಳೆಯರೇ ನಡೆಸುತ್ತಿರುವ ಸ್ವತಂತ್ರ ಪತ್ರಿಕೆ. ಓದುಗರು ಹಾಗೂ ಸಹೃದಯರು ನೀಡುವ ಆರ್ಥಿಕ ನೆರವೇ ಪತ್ರಿಕೆಯ ಜೀವಾಳ. ಚಂದಾದಾರರಿಗೆ ಚಂದಾ ಅವಧಿ ಮುಕ್ತಾಯವಾದುದರ ಬಗ್ಗೆ ಸೂಚನೆಯನ್ನು ನೀಡಲಾಗುತ್ತದೆ. ಓದುಗರು ತಕ್ಷಣ ಚಂದಾ ನವೀಕರಿಸಬೇಕೆಂದು ಕೋರುತ್ತೇವೆ. ಪತ್ರಿಕೆಯು ಉಳಿದು ಬೆಳೆಯಬೇಕಾದರೆ ಓದುಗರ ಸಹಕಾರ ಅತ್ಯಗತ್ಯ.

**ವಾರ್ಷಿಕ ಚಂದಾ : 40 ರೂ.**

**ಸಂಸ್ಥೆಗಳಿಗೆ : 75 ರೂ.**

*ಸಂ. ಮಂಡಳಿ*

REGD NO. KRNA 271

ವಿಳಾಸ :
ಮಾನಸ
ಪಂಚಾಯಿತಿ ರಸ್ತೆ
ಕಾಡುಗೋಡಿ
ಬೆಂಗಳೂರು - 560 067

BOOK-POST
PRINTED MATTER